ಚಿತ್ರಕಲ್ದುರ್ಗ

ವೆಂಬ

ಶ್ರೀಮಚ್ಚಿನ್ಮೂಲಾದ್ರಿ ಬೃಹನ್ಮಠ ಷಟ್‌ಸ್ಥಲ ಪ್ರಭು
ದ್ವಾರಾವತಿ ಶೂನ್ಯ ಸಿಂಹಾಸನ ಜಗದ್ಗುರು ಮುರಿಗಾರಾಜೇಂದ್ರ
ಮಹಾಸ್ವಾಮಿಗಳವರ

# ಷಟ್ಪ್ರವಲ್ಲರಿ

ಎಂಬ ಈ ಪುಸ್ತಕವು

ರಾಣೇಬೆನ್ನೂರ ಅಡಿವೆಪ್ಪಾ ಸಿದ್ಧಲಿಂಗಪ್ಪಾ ಕಟ್ಟಿಪ್ಪನವರ,
ಕುರುವತ್ತಿ ವ ಕೊಡಿಯಾಲ ಶೆಟ್ಟರಿಂದ ಪರಿಶೋಧಿಸಲ್ಪಟ್ಟು,

ಇದರ ಸರ್ವ ಬಾಧ್ಯತೆಯನ್ನು

ಬ್ಯಾಡಿಗಿ ಗಾಯತ್ರೀ ಪ್ರೆಸ್ಸಿನವರು ತಮ್ಮ ಕಡೆಗೆ ಇಟ್ಟುಕೊಂಡು,
ಪ್ರಿಂಟಮಾಡಲ್ಪಟ್ಟಿತು.

ಮೊದಲನೇ ಆವೃತ್ತಿ ೧೦೦೦ ಪ್ರತಿ

೧೯೦೫ ಇಶ್ವಿ



ಟಪಾಲಖರ್ಚ (೧) ಆಣೆ. ಕ್ರಯ (೮) ಆಣೆ

# ಸೂಚನೆ

ಶ್ರೀಮದ್ವೀರಶೈವ ಮಹಾನುಭಾವರಿಗೆ ವಿನಯ ಸೂಚನೆಯು —

ಈ ಮಹಾಸ್ವಾಮಿಗಳ ಪಟ್ಟವಲ್ಲರಿಯು ಜಗದಾದಿಯಿಂದ ನಡೆದು ಬಂದಿರುವದಿದ್ದು, ಅನೇಕ ಕಡಿಗೆ ಶೋಧಿಸಿದಾಗ್ಯೂ ನನ್ನ ಪ್ರಯತ್ನಕ್ಕೆ ಈಗ ಬೈಲಿಗಟ್ಟಿರುವದಿಷ್ಟೇ ಮಾತ್ರ ಶಿಕ್ಕಿತು. ಹೆಚ್ಚಿನದು ಶಿಗದಾದಕಾರಣ ಇಷ್ಟೇಮುದ್ರಿಸಿ ಪ್ರಕಟಿಸಿರುವೆನು. ಇದರಲ್ಲಿ ಅಕ್ಷರಸ್ಖಾಲಿತ್ಯಾದಿ ದೋಷಗಳಿದ್ದಾಗ್ಯೂ ಕ್ಷಮಿಸಿ, ಇದಕ್ಕೂ ಪ್ರಾಚೀನ ಲೇಖನಾಧಾರವನ್ನು ಸೂಚಿಸಿದಲ್ಲಿ ಅವರಿಗೆ ನಾನು ಬಹಳೇ ಆಭಾರಿಯಿರುವದಲ್ಲದೆ ಪುನರಾವೃತ್ತಿಯಲ್ಲಿ ಸಕಲವನ್ನೂ ಕ್ರೋಡೀಕರಿಸಿ ತಮ್ಮೆದುರಿಗಿಡುವೆನೆಂದು ಪೂರ್ಣ ನಂಬಿರುವ

ತಮ್ಮ ವಿಧೇಯ

ಯಲ್ಲನಗೌಡಾ ಫಕ್ಕೀರಗೌಡಾ ಹೊಸಪೇಟಿ ಗಾಯತ್ರೀ ಪ್ರೆಸ್

ಮ್ಯಾನೇಜರ ಬ್ಯಾಡಗಿ.



ಶ್ರೀಮನ್ನಿರಂಜನ ಜಗದ್ಗುರು ಮುರಿಗಾರಾಜೇಂದ್ರ ಮಹಾಸ್ವಾಮಿನೇ [illegible] ಸ್ತೇಂಡು

# ಪ್ರಸ್ತಾವನೆ

॥ ಶಾ, ವಿ, ವೃ. ॥

ಶ್ರೀಮನ್ನಿತ್ಯನಿರಂಜನಂ ಸುಮನಸಾದ್ಯರ್ಕಂಗಳಿಂ ಸನ್ನುತಂ ।
ವ್ಯಾಮೋಹಾಮಯ ವಜ್ರಿಗೌಷಧಸಮಂ ಶ್ರೀವೀರಶೈವಾಂಬುಧಿ ॥
ಸ್ತೋಮಂ ಸೂರ್ಯ ಸಹಸ್ರಕೋಟಿಬೆಳಗನ್ನಾಂತಿರ್ಪ ಶ್ರೀಷಣ್ಮುಖಂ॥
ಕಾಮಾರಾತಿ ಕುಮಾರನೀಯುಲೆಮಗತ್ಯಾನಂದ ಸಂದೋಹಮಂ ॥೧॥

ಶ್ರೀಪರಶಿವನಿಂದ ನಿರ್ಮಿತವಾಗಿರುವೀ ಜಗತ್ತಿನಲ್ಲಿ ಪುಣ್ಯಮಯವಾದ ಪಾವನ ಭೂಮಿ ಎಂದೆನಿಸುವ ಭರತಖಂಡದಲ್ಲಿ ಜಗದಾದಿಯಿಂದಲೂ, ವೀರಶೈವಧರ್ಮದ ಜನೌಘವು ವಾಸಿಸುತ್ತಿರುವದಷ್ಟೆ? ಆದಿಯಿಂದತ್ತಲಾದ ಅನಾದಿಕಾಲದಲ್ಲಿಯೂ

॥ ಶ್ಲೋ ॥ ಯಸ್ಮಿನ್ಬುದ್ಬುದಸಂಕರಾ ಇವಮುಹುರ್ಬ್ರಹ್ಮಾಂಡಖಂಡಾಃ ಕ್ವಚಿದ್ಭಾಂತಿ ಕ್ವಾಪಿಚಸೀಕರಾ ಇವ ವಿರಂಚ್ಯಾದ್ಯಾಸ್ಫುರಂತಿಕ್ರಮಾತ್ ॥ ಚಿದಸ್ತ್ರಾಸಾಲಹರೀವ ವಿಶ್ವಜನನೀಶಕ್ತಿಃ ಕ್ವಚಿದ್ದ್ಯೋತತೇ । ಸ್ವಾನಂದಾಮೃತನಿರ್ಭರಂ ಶಿವಮಹಾಪಾಥೋನಿಧಿಂ ತನ್ನುಮಃ ॥೧॥ ಜಗಜ್ಜನ್ಮಾದ್ಯುಪಾದಾನಂ ಸಚ್ಚಿದಾನಂದವಿಗ್ರಹಂ ॥ ಶಿವಂ ಸ್ಥಿರತ್ರಸಾಕಾರಂ ನತ್ವಾ ಸೂತ್ರಾರ್ಥ ಉಚ್ಯತೇ ॥೨॥

ಎಂಬಂತೆ ತೇಜೋಮಯವಾದ ನಿರಾಕಾರ, ನಿರಂಜನ, ನಿರ್ಲೇಪವಾದ ಪರಬ್ರಹ್ಮ ವಸ್ತುವೇ ಜಗಜ್ಜನ್ಮಾದ್ಯುಪಾದಾನಕ್ಕೋಸ್ಕರ ಸಚ್ಚಿದಾನಂದ ರೂಪಿನಿಂದೆ ಸದಾಶಿವನಾಗಿ, ಆ ಪರಬ್ರಹ್ಮವಸ್ತುವಿನ ಚಿದಸ್ತ್ರಪಲಹರಿಯೋ ವಿಶ್ವಜನನೀ ಶಕ್ತಿಯೆಂಬುಮೆಯಾಗಿ, ಆ ಉಮೆಯಿಂದೊಡಗೂಡಿದ ಸೋಮನೆಂಬ ಶಿವನಿಂದ ಸಕಲ ಸಚರಾಚರ ಜೀವಮಯವಾಗಿರುವ ಸಕಲ ಜಗತ್ತೆಲ್ಲವೂ ನಿರ್ಮಾಣವಾಗಿರುವದೆಂಬದು ಶ್ರೀಮನ್ನೀಲಕಂಠ ಭಾಷ್ಯದಲ್ಲಿ ಉಪನಿಷದಾಧಾರದಿಂದ ಕಂಡುಬರುವದು. ಋಗ್ಯಜುರ್ವೇದ ವಾಕ್ಯಂಗಳಲ್ಲಿ * ॥ ಏಕಮೇವಾದ್ವಿತಿಯಂ ಬ್ರಹ್ಮ । ಏಕಏವ ರುದ್ರೋನದ್ವಿತೀಯತಸ್ಥೆ ॥ * ಎಂದು ಇತ್ಯಾದರಣಾದ್ವೈತ ನಿಷೇಧಂಗಳಿಂದೆ ಅನಾದಿರುದ್ರನೋರ್ವನೇ ಪರಬ್ರಹ್ಮವೆಂದು ನಿರ್ಣೈಸಲ್ಪಟ್ಟಿರುವದಲ್ಲದೆ, ಅಥರ್ವಣವೇದದಲ್ಲಿ * ॥ ಬ್ರಹ್ಮವಿಷ್ಣುರುದ್ರೇಂದ್ರಾ

ಯಸ್ಮಾತ್ಸರ್ವಾಣಿಚೇಂದ್ರಿಯಾಣಿ ಸಹ ಭೂತೈರ್ನ ಕಾರಣಂ ಕಾರಣಾಂ ತ ಃ ಸರ್ವೈಶ್ವರ್ಯಸಂಪನ್ನ ಸರ್ವೇಶ್ವರಶ್ಶಂಭುರಾಕಾಶಮಧ್ಯೇಧ್ಯೇಯಃ ॥ * ಎಂಬ ಕಾರಣದಿಂದ ಸಮಸ್ತ ಇಂದ್ರಿಯಂಗಳು ಸಹವಾಗಿ ಮಹಾಪಂಚಭೂತಂಗಳೊಡನೆ ಬ್ರಹ್ಮ ವಿಷ್ಣು ರುದ್ರೇಂದ್ರಾದಿ ದೇವತೆಗಳು ಪಡೆಯಲ್ಪಡುತ್ತಿಹರು. ಜನನಕ್ಕೆ ಕಾರಣವಿಲ್ಲದಿರುವವನು ಸಮಸ್ತ ವಿಷ್ಣು ಬ್ರಹ್ಮೇಂದ್ರಾದಿ ದೇವತೆಗಳ ಜನನಕ್ಕೆ ಕಾರಣನಾಗಿ ಸರ್ವರಿಂದಲೂ ಧ್ಯಾನಕ್ಕೆ ಯೋಗ್ಯನಾಗಿಪರಾತ್ಪರನಾಗಿ, ಷಡ್ಗುಣೈಶ್ವರ್ಯಸಂಪನ್ನನಾಗಿ ಸಮಸ್ತ ಸಚರಾಚರಂಗಳಿಗೂ ಕಾರಣ ಕರ್ತೃವಾಗಿ ಚಿದಾಕಾಶಮಧ್ಯದಲ್ಲಿ ನಿತ್ಯನಾದವನು ಶಂಭುವೇ ಎಂದು ಪ್ರಸಿದ್ಧಿಯಾಗಿರುವದರಿಂದಲೂ * ॥ ಶಿವ ಏಕೋಧ್ಯೇಯಃ ಶಿವಂಕರಃ ಸರ್ವಮನ್ಯತ್ಪರಿತ್ಯಜ್ಯಂ॥ * ಅಂದರೆ ಸಮಸ್ತ ಜೀವರಿಗೂ ಮಂಗಲ್ಯಕರನಾದ ಶಿವನೋರ್ವನೇ ಧ್ಯಾನಕ್ಕೆ ಯೋಗ್ಯನು ಅನ್ಯತ್ರ ವಿಷ್ಣು ಬ್ರಹ್ಮಾದಿದೇವತೆಗಳು ಯೋಗ್ಯರಲ್ಲವೆಂದು ಅಥರ್ವ ಶಿಖೆಯಲ್ಲಿಪಠಿತಸೂಕ್ತಿಯಾಗಿರುವದರಿಂದ *॥ಶಿವ ಏಕೋಧ್ಯೇಯಃ॥ * ಎಂಬಂತೆ ಅದ್ವಿತೀಯ ಪರಬ್ರಹ್ಮವು ಶಿವನೋರ್ವನೇ ಎಂದು ಚತುರ್ವೇದಂಗಳ ಆದಿಮಧ್ಯಾಂತಂಗಳಲ್ಲಿಯೂ,"ಶಿವನನ್ನೇ ಹೇಳುವದರಿಂದ ಶಿವನೇ ಶ್ರೇಷ್ಠನು ಜಗದಾದಿಮೂಲನು ದೇವದೇವನೆಂಬುವದು ವೇದಾಗಮೋಪನಿಷತ್ತುಗಳಿಂದ ಸಿದ್ಧವಾಗಿರುವದು,

॥ ಶ್ಲೋ ॥ ಕ್ರಿಮಿಕೀಟಪತಂಗೇಭ್ಯಃ ಪಶವಃ ಪ್ರಜ್ಞಯಾಧಿಕಾಃ । ಪಶುಭ್ಯೋಪಿನರಾಶ್ರೇಷ್ಠಾಸ್ತೇಷು ಶ್ರೇಷ್ಠಾದ್ವಿಜಾತಯಃ । ದ್ವಿಜಾತಿಷ್ವಧಿಕಾವಿಪ್ರಾವಿಪ್ರೇಷುಕ್ರತುಬುದ್ಧಯಃ । ಕ್ರತುಬುದ್ಧಿಷು ಕರ್ತಾರಸ್ತೇಭ್ಯಸ್ಸನ್ಯಾಸಿನೋಧಿಕಾಃ । ತೇಭ್ಯೋವಿಜ್ಞಾನಿನಶ್ರೇಷ್ಠಾಸ್ತೇಷು ಶಂಕರ ಪೂಜಕಾಃ । ತೇಷುಶ್ರೇಷ್ಠಾ ಮಹಾಭಾಗ ಮಮಲಿಂಗಾಂಗ ಸಂಗಿನಃ । ಲಿಂಗಾಂಗಸಂಗಿಷ್ವಧಿಕ ಷಟ್‌ಸ್ಥಲ ಜ್ಞಾನವಾನ್ಭವೇತ್ । ತಸ್ಮಾದ್ಯಸ್ಯಧಿಕೋನಾಸ್ತಿ ತ್ರಿಷುಲೋಕೇಷು ಸರ್ವದಾ ॥೧॥ *

ಎಂಬ ವ್ಯಾಸಕೃತ ಸ್ಕಾಂದಪುರಾಣ ಶಂಕರಸಂಹಿತೋಕ್ತಿಯಂತೆ ಜಗತ್ತಿನಲ್ಲಿ ಕ್ರಿಮಿಕೀಟಾದಿಗಳಿಗಿಂತಲೂ ಪಶುವೇ ಅಧಿಕ, ಪಶುವಿಗಿಂತಲೂ ಮನುಷ್ಯರಧಿಕ, ಮನುಷ್ಯರಲ್ಲಿ ದ್ವಿಜರಧಿಕ, ದ್ವಿಜರಿಗಿಂತಲೂ ವೇದಾಧ್ಯಯನ ಮಾಡುವ ವಿಪ್ರನಧಿಕ, ವಿಪ್ರನಿಗಿಂತಲೂ ಯಜ್ಞಮಾಡುವನಧಿಕ, ಯಜ್ಞಮಾಡುವವರಿಗಿಂತಲೂ ಯಜ್ಞದೀಕ್ಷಿತರಧಿಕ ಅವರಿಗಿಂತಲೂ ಸನ್ಯಾಸಿಯಧಿಕ ಸನ್ಯಾಸಿಗಿಂತಲೂ ಜ್ಞಾನಿಯಧಿಕ, ಆ ಜ್ಞಾನಿಗಿಂತಲೂ ಶಂಕರಾರಾಧಕನಧಿಕ, ಅವರಿಗಿಂತಲೂ ಲಿಂಗಾಂಗ ಸಂಗಿಗಳಾದ ವೀರಶೈವರಧಿಕ, ಅವರಿಗಿಂತಲೂ ಷಟ್‌ಸ್ಥಲ ಜ್ಞಾನಿಯಾದವಿರಕ್ತನಧಿಕ, ವೀರಶೈವ

ಷಟ್‌ಸ್ಥಲ ಜ್ಞಾನಿಗೆ ಮೂರುಲೋಕಂಗಳಲ್ಲಿಯೂ ಸಮಾನರೆ ಇಲ್ಲವೆಂದು ಕಂಡು ಬರುವದು.

ಈ ವೀರಶೈವರಲ್ಲಿ ಸಮಸ್ತ ಸ್ತ್ರೀಪುರುಷರಿಗೂ, ಬಾಲಕರಿಗೂ ಕೂಡಾ ಲಿಂಗಧಾರಣದೀಕ್ಷಾ ಸಂಸ್ಕಾರವು ಜನನಕ್ಕಿಂತ ಪೂರ್ವದಲ್ಲಿಯೇ ಗರ್ಭಧಾರಣದ ಏಳನೆಯ ತಿಂಗಳಲ್ಲಿ ವಿಧ್ಯುಕ್ತರೀತಿಯಿಂದಾಗುವ ಕಾರಣ,

* ॥ ಶ್ಲೋ ॥ ಜನ್ಮನಾಜಾಯತೆ ಶೂದ್ರಃ । ಸಂಸ್ಕಾರಾದ್ವಿಜ ಉಚ್ಯತೆ ॥ ವೇದಾಭ್ಯಾಸ ಭವೇದ್ವಿಪ್ರ। ಬ್ರಹ್ಮಜಾನಾತಿ ಬ್ರಾಹ್ಮಣಃ ॥ ೧ ॥ *

ಎಂಬಂತೆ ಲಿಂಗಾಂಗಸಂಗಿಗಳಾದ ವೀರಶೈವರಿಗೆ ಶೂದ್ರತ್ವವು ಇರುವದೇ ಇಲ್ಲ. ಅನ್ಯಮತದವರಲ್ಲಿ ಜನನಕಾಲಕ್ಕೆ ಕೆಲವು ವರ್ಷಗಳನಂತರ ಸಂಸ್ಕಾರವು ಆಗುವದರಿಂದ ಇತರ ಮತಕ್ಕಿಂತಲೂ ವೀರಶೈವರೇ ಶ್ರೇಷ್ಠರು ಎಂದು ಸಿದ್ಧವಾಗುವದಲ್ಲದೆ, ವೀರಶೈವ ಬ್ರಾಹ್ಮಣತ್ವವು ವೀರಶೈವರಿಗೇ ಉಂಟೆಂಬುವದನ್ನು ಅನೇಕದೃಷ್ಟಾಂತಗಳಿಂದಲೂ, ವೇದಾಗಮೋಪನಿಷತ್ತುಗಳಿಂದಲೂ, ಸಿದ್ಧಮಾಡಿ ಕೊಡಬಹುದು.

* ॥ ಶ್ಲೋ ॥ ಆದಿಶುದ್ರಾಂಗಮುಕ್ತತ್ವಂ । ಮುಖೇಬ್ರಾಹ್ಮಣ ಮೀಶ್ವರಂ । ವಿಷ್ಣುಕ್ಷತ್ರಿಯಮಿತ್ಯಾಹು ಬಾಹುದೇಶೆವ್ಯವಸ್ಥಿತಾಃ ॥ ಜಂಘೇನಜಾಯತೆಶೂದ್ರಃ ಕರ್ಮಣಾದ್ವಿಜ ಉಚ್ಯತೆ । ವೇದಾಭ್ಯಾಸ ಭವೇದ್ವಿಪ್ರ ಬ್ರಹ್ಮಜಾನಾತಿಬ್ರಾಹ್ಮಣಃ ॥೧॥ *

ಎಂಬ ಶ್ಲೋಕೋಕ್ತಿಯಂತೆ ವೀರಶೈವರೇ ಬ್ರಾಹ್ಮಣರೆಂದು ನಿರ್ವಿವಾದದಿಂದೆ ಸಿದ್ಧವಾಗುತ್ತದೆ. ಜಗದಾದಿಯಲ್ಲಿ ಸರ್ವ ಶಿಕ್ಷಾಮೋಕ್ಷಾದಿ ಕಾರಣಕರ್ತ್ರೃನಾದ ಅನಾದಿ ಚರನಿರಂಜನಪ್ರಭು, ಜಂಗಮಾದಿ ಪದ ವಾಚ್ಯತ್ವದಿಂದ ಶಿವನೇ ಯುಗಯುಗಾಂತರಗಳಲ್ಲಿ ನಿರಾಭಾರಿ ಶ್ರೀವೀರಶೈವಷಟ್‌ಸ್ಥಲ ಸ್ಥಾಪನಾಚಾರ್ಯವರ್ಯರಾಗಿ, ಜಗದ್ಗುರುಗಳಾಗಿದ್ದರೆಂಬುವದು ವಾತುಲಾಗಮದ ಉತ್ತರಭಾಗದಲ್ಲಿ ವಿಶದವಾಗಿ ಕಂಡು ಬರುವದು.

* ॥ ಶ್ಲೋ ॥ ಆದೌತಜ್ಜರಲಿಂಗಂತು ನಿರಂಜನ ಇತಿಸ್ಮೃತಂ । ತ್ರೇತಾಯಾಂ ದೈವತಂಚೈತನ್ನಿರ್ಮಾಯ ಇತಿಕೀರ್ತಿತಂ ॥ ದ್ವಾಪರೆನಿಷ್ಕಲ ಶ್ಚೇತಿವಿಶೃತಂಚತದೇವಹಿ । ಕಲೌಪ್ರಭುರಿತಿಖ್ಯಾತಂತಸ್ಯನಾಮಾನಿಷ್ಯತ್ರಮಾತ್‌। ಕಲೌತತ್ಪ್ರಭು ದೇವಸ್ಯ ಪೀಠಂ ಕಲ್ಯಾಣಪತ್ತನೆ ॥ ೧ ॥ *

ಎಂಬ ವಾತುಲಾಗಮೋಕ್ತಿಯಂತೆ ಆದಿಯುಗದಲ್ಲಿ ನಿರಂಜನದೇವ, ತ್ರೇತಾಯುಗದಲ್ಲಿ ನಿರ್ಮಾಯದೇವ, ದ್ವಾಪರಯುಗದಲ್ಲಿ ನಿಷ್ಕಲದೇವ, ಕಲಿಯುಗದಲ್ಲಿ ಪ್ರಭುದೇವನೆಂಬಿತ್ಯಾದಿ ನಾಮಧೊಡನೆ ನಾದ ಬಿಂದು ಕಲಾತ್ಮಕ ತ್ರಿಪ್ರಣವಮಗರ್ಭ

ತ್ವದಿಂ ಶೂನ್ಯ ಸಿಂಹಾಸನಾಧಿಪತಿಗಳಾಗಿ, ಜಗದ್ಗುರುಗಳೆಂದು ಪ್ರಸಿದ್ಧರಾದರು. ಪರಮೇಶ್ವರನ ಪಂಚಮುಖಗಳಿಂದ ಪಂಚಾಚಾರ್ಯರೆಂಬ ರೇಣುಕರು, ದಾರುಕರು, ಘಂಟಾಕರ್ಣ, ಗಜಕರ್ಣ, ವಿಶ್ವಕರ್ಣರು. ರಂಭಾಪುರಿ, ( ಬಾಳೇಹಳ್ಳಿ ) ಉಜ್ಜಯಿನಿ, ಕೊಲ್ಲಿಪಾಕಿ, ಶ್ರೀಶೈಲ, ಕಾಶಿ ಎಂಬ ಪಂಚಪೀಠ ಸಿಂಹಾಸನಗಳನ್ನು ನಿರ್ಮಿಸಿ, ರುತ್ವಿಜರೆಂದೆನಿಸಿಕೊಂಡರು. ಜಗದಾದಿಯಿಂದಲೂ ಇರುವ ವೀರಶೈವರ ಉತ್ಪತ್ತಿಯನ್ನು ಸುಪ್ರಭೇದಾಗಮದಲ್ಲಿ ವಿಸ್ತಾರವಾಗಿ ನೋಡಬಹುದು.

ಪ್ರಭುದೇವರು ಕಲಿಶಕೆ ( ೪೨೬೫ ) ನೆಯ ವಿಕ್ರಮಸಂವತ್ಸರದಲ್ಲಿ ಬಿಜ್ಜಳರಾಜನ ಮಂತ್ರಿಯಾಗಿ, ಕಲ್ಯಾಣಪಟ್ಟಣದಲ್ಲಿರುವ „ ಶ್ರೀಬಸವೇಶ್ವರನ " ಭಕ್ತಿಯಂ ನೋಡಲೋಸುಗ ಕಲ್ಯಾಣಪಟ್ಟಣಕ್ಕೆ ಗಮಿಸುವ ಕಾಲದಲ್ಲಿ, ಕೆಲವು ಶಿವಶರಣರಿಗೆ ಲಿಂಗಾಂಗ, ಸಾಮರಸ್ಯ, ತತ್ವಬೋಧವನ್ನು ಹೆಚ್ಚುಪದೇಶಿಸಿ, ಸೊನ್ನಲಾಪುರಕ್ಕೆ ತೆರಳಿ, ಸಿದ್ಧರಾಮೇಶ್ವರಂಗೆ ಬೋಧೆಯನ್ನಿತ್ತು, ಸಿದ್ಧರಾಮೇಶನೊಡನೆ ಕಲ್ಯಾಣಕ್ಕೆ ಗಮಿಸಿ, ಮರುಳಶಂಕರದೇವರಿಗೆ ನಿಜಪದವಂ ಕೊಟ್ಟು, ಬಸವಾದಿ ಪ್ರಮಥರಿಗೆ ಇಷ್ಟ, ಪ್ರಾಣ, ಭಾವಲಿಂಗಕ್ರಮವಂ ಬೋಧಿಸಿ, ಬಸವೇಶ್ವರನು ರಚಿಸಿದ, ಶೂನ್ಯಸಿಂಹಾಸನದೊಳ್ವಿರಾಜಿತರಾಗಿ, ಬಸವೇಶ್ವರನ ಭಕ್ತಿಯಂ ಸ್ವೀಕರಿಸಿ, ಕಲಿಶಕೆ ೪೦೦೧ ರಲ್ಲಿ ಶ್ರೀಚನ್ನಬಸವಣ್ಣನವರಿಗೆ ಶೂನ್ಯ ಸಿಂಹಾಸನದ ಪಟ್ಟವಂಗಟ್ಟಿ, ಸರ್ವ ಪ್ರಮಥರುಗಳಿಗೆ ದರ್ಶನಾಶೀರ್ವಾದವಂ ದಯಪಾಲಿಸಿ, ಕೈಲಾಸಕ್ಕೆ ಗಮಿಸಿದರು. ಪ್ರಭುದೇವರಿಗಿಂತಲೂ ಪೂರ್ವದಲ್ಲಿ „ ಶ್ರೀಷಣ್ಮುಖಸ್ವಾಮಿಗಳು " ಜಗದ್ಗುರುಗಳಾಗಿದ್ದರು.

ಆನಂತರ ಶ್ರೀಪ್ರಭುದೇವರು, ತರುವಾಯ ಚನ್ನಬಸವಣ್ಣನವರು, ಜಗದ್ಗುರುಗಳಾಗುತ್ತ ಬಂದರು. ಶ್ರೀಚನ್ನಬಸವಾಚಾರ್ಯರಾದಿಯಾಗಿ, ಈ ವರೆಗೂ ನಡೆಯುತ್ತ ಬಂದ ಚಿತ್ರದುರ್ಗದ ಬೃಹನ್ಮಠದ ಶೂನ್ಯ ಸಿಂಹಾಸನದ ಪಟ್ಟಾಂತರಗಳ ವಿವರವೇ ಈ ಗ್ರಂಥದ ಐತಿಹಾಸಿಕದ ಮೂಲವು. ಬೃಹನ್ಮಠದಲ್ಲಿ ವಾಕ್ಯರೂಪದಿಂದಿರುವೀ ಪಟ್ಟಾವಳಿಯೆಂಬ ಪುಸ್ತಕವನ್ನು ವೀರಶೈವ ಮತಾಭಿಮಾನಿಗಳಾದ ಶ್ರೀಮತ್ಸದ್ಗುಣಗಣಾಲಂಕೃತರಾದ ಬ್ಯಾಡಿಗಿ ಶೆಟ್ಟರ ಚನ್ನವೀರಪ್ಪಣ್ಣನವರು ತರಿಸಿಕೊಟ್ಟು, ಚೆನ್ನಾಗಿ ಪರಿಶೋಧಿಸಿ ಪ್ರಸಿದ್ಧಿಸಬೇಕೆಂದು ಪ್ರೋತ್ಸಾಹವನ್ನುಂಟುಮಾಡಿದ್ದರಿಂದ, ನಾನು ಇದನ್ನು ಪರಿಶೋಧಿಸಿ, ಪ್ರತಿ ಪಟ್ಟಾರಂಭದಲ್ಲಿಯೂ, ನನ್ನಿಂದ ರಚಿಸಲ್ಪಟ್ಟ, ಕಂದ, ವೃತ್ತಾದಿಗಳನ್ನು ಆಯಾಯ ಸ್ವಾಮಿಗಳ ಹೆಸರುಗಳು ಸಹ ಬರುವಂತೆರಚಿಸಿ, ಆಯಾಯ ಪಟ್ಟಾರಂಭದಲ್ಲಿ ಸೇರಿಸಿರುತ್ತೇನೆ. ಈ ಪಟ್ಟಾವಳಿಯೆಂಬ ಪುಸ್ತಕವು ಮೂಲಮಠದಲ್ಲಿಯೇ ಮಾತ್ರ ಇರುವದರಿಂದ ಎಲ್ಲರಿಗೂ ದೊರೆಯುವದು ದುರ್ಲಭವು. ಈ

ಕ್ಷರಿಂದೀಮಹನೀಯರ ಪವಿತ್ರವಾದ ಲೀಲಾಚಾರಿತ್ರವು ಸಹಜವೇ ಎಲ್ಲ ವೀರಶೈವರಿಗೆ ದೊರೆಯಬೇಕೆಂಬ ಕುತೂಹಲದಿಂದಲೇ ಬ್ಯಾಡಿಗಿ ಗಾಯತ್ರೀ ಪ್ರೆಸ್ಸಿನವರು ಇದರ ಸರ್ವ ಮಾಲ್ಕಿಯನ್ನು ತಮ್ಮ ಕಡೆಗಿರಿಸಿಕೊಂಡು, ಪ್ರಸಿದ್ಧಿಸಿರುತ್ತಾರೆ.

ಸಹಜವೆ ದಿನಂಪ್ರತಿಯಲ್ಲಿಯೂ,ಮಹಾಸ್ವಾಮಿಗಳವರಲೀಲಾಚಾರಿತ್ರವನ್ನು ಪಠಿಸಿದರೆ, ಸರ್ವ ದೋಷಗಳೂ ನಿವಾರಣೆಯನ್ನೈದುವಕಾರಣ, ವೀರಶೈವರಲ್ಲಿ ಪ್ರತಿಯೊಬ್ಬರೂ ಈ ಪುಸ್ತಕವನ್ನು ಸಂಗ್ರಹಿಸುವದು ಅತ್ಯವಶ್ಯವಾದ ಸಂಗತಿಯಾಗಿರುತ್ತದೆ.ನನ್ನ ಅಲ್ಪಮತಿಗೆ ಗೋಚರವಾಗಿರುವಷ್ಟು ವಿಷಯಂಗಳಂ ಕ್ರೋಢೀಕರಿಸಿ,ನಾನು ಹೊಸದಾಗಿರಚಿಸಿಬರೆದಿರುವ ಈ ಉಪೋದ್ಘಾತದಲ್ಲಿಯೂ, ಮತ್ತು ಮೂಲ ಐತಿಹಾಸಿಕ ಮಾದೀ ಗ್ರಂಥದಲ್ಲಿಯೂ ಸಹ ಅಕ್ಷರಸಾಲಿತ್ಯಾದಿ ತಪ್ಪುಗಳಿರುವಪಕ್ಷದಲ್ಲಿ ಗುಣಜ್ಞರು

* ॥ ಕಂದ ॥ ಚಾತಕಶುಕ್ತಿಯು ಪಾರಜ ।
ಭೂತಳಜಲವನ್ನು ಮೇಘಕಣಗಣಕುಜ್ಝಿತ ॥
ಧಾತುಗಳನುಳಿದುಮುಂಬನಿ ।
ಸ್ವಾತಿಯಪನಿ ಸ್ವರ್ಣವಾಂಪವರಿನೀವಿಕುರ್ಗಂ ॥ ೧ ॥ *

ಎಂಬೀ ಉಕ್ತಿಯಂತೆ ಗುಣಜ್ಞರು ಗುಣವನ್ನೇ ಅಂಗೀಕರಿಸುವಿರೆಂದು ನಂಬಿರುತ್ತೇನೆ.

ಈ ಗ್ರಂಥವು ಇನ್ನೂ ಹೆಚ್ಚು ಮಾಹಿತಿಯುಳ್ಳದ್ದಿದ್ದು, ಆಗದೀತ್ವರೆಯಿಂದ ಅಂದರೆ ಸ್ವಲ್ಪದಿವಸದಲ್ಲಿ ಸಂಕ್ಷಿಪ್ತ ಪ್ರಿಂಟ್‌ಮಾಡಿ, ಪ್ರಸಿದ್ಧಿಸುವ ಸಂದರ್ಭ ವದಗಿದಕಾರಣ, ಕಂದ ವೃತ್ತಾದಿಗಳಲ್ಲಿ ಗ್ರಂಥ ಶೋಧಕರಿಂದ ತಪ್ಪುಗಳಾಗಿರಬಹುದು; ಆದರೆ ಪುನರಾವೃತ್ತಿಯಲ್ಲಿ, ಸರ್ವ ವಿಷಯದಲ್ಲಿಯೂ, ಯೋಗ್ಯ ರೀತಿ ಸುಧಾರಿಸಿ ಪೂರ್ಣ ಮಾಹಿತಿಯಿಂದಾ ಕ್ರೋಢೀಕರಿಸಿ, ಪ್ರಿಂಟ್‌ಮಾಡಲ್ಪಡುವದು.

ಗ್ರಂಥಶೋಧಕ
ಅಡಿವೆಪ್ಪಾ ಸಿದ್ಧಲಿಂಗಪ್ಪಾ ಕಟ್ಟೆಪ್ಪನವರ ರಾಣೇಬೆನ್ನೂರ.

ಗ್ರಂಥಮಾಲಕ
ಯಲ್ಲನಗೌಡಾ ಫಕ್ಕೀರಗೌಡಾ
ಹೊಸಪೇಟೆ ಗಾಯತ್ರೀ ಪ್ರಿಂಟಿಂಗ ಪ್ರೆಸ್, ಬ್ಯಾಡಿಗಿ.

॥ ಶ್ರೀಮಚ್ಚನ್ನಬಸವೆಸ್ವಾಮಿನೇನಮಃ ॥

# ೧ನೇ ಪಟ್ಟ.



॥ ಚೆ. ಮ. ವೃ. ॥ ಸ್ಮರಹರಸಾಂಬನಾಜ್ಞೆಯೊಳೆ ಶ್ರೀಸುಕುಮಾರಸು
ಧೀರವೀರಶಂ । ಕರಕುವರಂ ಸುಭೂಮಿಯೊಳು ಶ್ರೀಗುರುರೂಪವ
ನಾಂತುಸಂತತಂ ॥ ಸುರಚಿರಚಲ್ವಚನ್ನಬಸವೇಶ್ವರ ನೆಂದೆನಿಸುತ್ತೆಭಕ್ತ
ರಂ । ಪರಿಪರಿಯಿಂದೆಪಾಲಿಸುಗೆಮನ್ಮನದಾಶೆಯನಿತ್ತು ಸಾರ್ವದಂ॥೧॥

ಶ್ರೀ ಮಚ್ಚನ್ನಬಸವೇಶ್ವರ ದೇವರು ಶೂನ್ಯ ಸಿಂಹಾಸನಾಧಿಪತಿಗಳಾಗಿಯೂ, ಶ್ರೀಮದ್ವೀರಶೈವ ಮತೋದ್ಧಾರಕರಾಗಿಯೂ, ಗುರುಲಿಂಗಜಂಗಮ ದಾಸೋಹ ಸೀಲರಾಗಿಯೂ, ಮಹತ್ವಾತಿಶಯಯುತರಾಗಿಯೂ, ಸಾಕ್ಷಾಚ್ಛಿವಸ್ವರೂಪಿಗಳಾಗಿಯೂ, ಬಿಜ್ಜಳರಾಜನ ಪ್ರಧಾನತ್ವದಲ್ಲಿ ಸಕಲ ರಾಜವೈಭವ ಬಿರುದಾವಳಿಗಳಿಂದುತ್ಸಾಹಗೊಳ್ಳುವರಾಗಿಯೂ, ಇರುವಕಾಲದಲ್ಲಿ ಕಲ್ಯಾಣಪಟ್ಟಣದಲ್ಲಿ ಮಧುವಯ್ಯನೆಂಬೋರ್ವ ಬ್ರಾಹ್ಮಣನಿಗೂ, ಹರಳಯ್ಯನೆಂಬೋರ್ವ ಶಿವಶರಣನಿಗೂ, ದೇಹಸಂಬಂಧವಾದ ಬೀಗತನವು ಪ್ರಾರಂಭಿಸಲಾಗಿ, ಅದನ್ನು ಕೇಳಿದ ಬಿಜ್ಜಳರಾಜನು ಕಾಲಕ್ಕೆ ಸರಿಯಾದ ದುರ್ಬುದ್ಧಿಯಿಂದ, ಅವರಿಂ ತರಿಸಿ, ಎಳೆಹೂಟೆಯಂ ಕಟ್ಟಿಸಿ, ಎಳಿಸಬೇಕೆಂದಾಲೋಚಿಸಲು, ಶ್ರೀಮಚ್ಚನ್ನಬಸವೇಶ್ವರ ದೇವರು ಭಕ್ತದ್ರೋ

ಹವಂ ನೋಡಬಾರದೆಂದು ಮಹಗಣ ಪರ್ವದ ಸಲುವಾಗಿ, ಕಪ್ಪಡಿ ಸಂಗಮೇಶ್ವರ ಪಲ್ಲಿಗೆ ಹೋಗಿ ಬರುತ್ತೇವೆಂದು ಬಿಜ್ಜಳರಾಯುಗೆ ತಿಳಿಸಿ, ಮಲ್ಲೂಖಾನನೆಂಬ ವಜೀರ ನಿಂದ ಹನ್ನೆರಡು ಸಾವಿರ ಸೈನ್ಯವಂ ತೆಗೆದುಕೊಂಡು, ಪ್ರಮಥರೊಡನೆ ಹೊರಟರು. ಅಗ್ಗೆ ಜಗದೇವ ಮೊಲ್ಲೆಬೊಂಮಣರೆಂಬ ಭಕ್ತರನ್ನು ಕರಿಸಿಕೊಂಡು, ಶಿವಭಕ್ತ ದ್ರೋ ಹಿಯಾದ ಬಿಜ್ಜಳನನ್ನು ಸಂಹರಿಸುವದೆಂದು ಆಜ್ಞಾಪಿಸಲು, ಅವರಾಜ್ಞೆಯಂ ಕೈ ಕೊಂಡು, ಜಗದೇವ ಮೊಲ್ಲೆಬೊಂಮಣಗಳು ತಮ್ಮ ತಾಯಿಯ ಅಪ್ಪಣೆಯನ್ನು ಪಡೆದು, ವೀರಾವೇಶದಿಂದ ಕಾಲಭೈರವರಂತೆ ಆರ್ಭಟಿಸುತ್ತಾ ಬಿಜ್ಜಳನ ಬಳಿಗೈ ತಂದು, ಅವನನ್ನು ಸಂಹರಿಸಿದರು. ಬಿಜ್ಜಳರಾಜನ ಅಳಿಯನಾದ ಅಳಿಯ ಬಿಜ ಳನು ಮಹಾ ಕೋಪಾವೇಶದಿಂದೆ ಕೂಡಿದವನಾಗಿ, ಮಹಾ ಸೈನ್ಯವಂ ತೆಗೆದು ಕೊಂಡು, ಉಳವಿಗೆ ಬಿಜಯಂಗೈಯುವ ಚನ್ನಬಸವಾದಿ ಪ್ರಮಥರನ್ನು ಬೆನ್ನಟ್ಟಿ ಬ ರಲಾಗಿ, ಅಲ್ಲೆ ಉಭಯ ಪಕ್ಷದವರಲ್ಲಿಯೂ ಮಹತ್ತಾದ ಯುದ್ಧವಾಗಿ, ಅಳಿಯ ಬಿ ಜ್ಜಳನು ಮುರಿದು ಹಿಂದಕ್ಕೋಡಿ, ಕಲ್ಯಾಣ ಪಟ್ಟಣದಲ್ಲಿ ಶೇರಿಕೊಂಡನು. ಯು ದ್ಧವಾದ ಸ್ಥಳದಿಂದಳಿಯ ಬಿಜ್ಜಳನು ಮುರಿದೋಡಿದ್ದರಿಂದ ಆ ಸ್ಥಳದಲ್ಲೆ ಮುರಿದೋ ಡೆಂಬ ಗ್ರಾಮವು ಉತ್ಪನ್ನವಾಗಿರುವದು. ಅದು ಈಗ ಮುಂಡಗೋಡೆಂದು ಹೆಸ ರಾಗಿರುವದು. ಅಲ್ಲಿಂದ ಮುಂದಕ್ಕೆ ಬಿಜಯಂಗೈಸಿದ ಸರ್ವ ಪ್ರಮಥಾಳಿಯು ಅಳಿ ಯ ಬಿಜ್ಜಳನ ಸೈನ್ಯವು ಬರುವದೋ? ಹಿಂದಕ್ಕೆ ತೆರಳುವದೋ? ಎಂದು ತಮ್ಮ ತಮ್ಮ ಲಲಾಟಕ್ಕೆ ಮೇಲು ಕಯ್ಯಗಳನ್ನಿಟ್ಟು, ತಿರಿಗಿ ನೋಡಿದ ಸ್ಥಳದಲ್ಲಿ ಮೇಲುಗೈ ಯ ಲ್ಲಾಪುರವೆಂಬ ಗ್ರಾಮವು ಉಂಟಾಯಿತು. ಈ ಮೇಲುಗೈ ಯಲ್ಲಾಪುರವು ಈಗ ಲಾದರು ಕಾನಡಾ ಜಿಲ್ಹೆಯಲ್ಲಿರುವದು. ಈ ಸ್ಥಳದಿಂದ ಶ್ರೀಮಚ್ಚನ್ನಬಸವ ದೇವರು ಪ್ರಮಥರೊಡನೆ ಉಳಿವಿಗೆ ಬಿಜಯಂಗೈಸುವ ಪಥದೊಳೊಂದು ಬೆಟ್ಟದಲ್ಲಿ ಶಿವ ಪೂಜೆಯಂ ಮಾಡಿ, ಪ್ರಸಾದವಂ ಭುಂಜಿಸಿ, ಲಕ್ಷೋಪಲಕ್ಷ ಸಂಖ್ಯೆಯಾದ ಮಜ್ಜನ ಸಾಲೆ, ಧೂಪಾರತಿ ಮುಂತಾದ ಸಾಮಾನಗಳಂ ಬಿಟ್ಟು, ಮುಂದಕ್ಕೆ ತೆರಳಿದ್ದರಿಂದಾ ಬೆಟ್ಟವು ಹುತ್ತ ಮಯವಾಗಿರುವ ಕಾರಣ, ಅದಕ್ಕೆ ಧೂಪದ ಗುಡ್ಡವೆಂತಲೂ, ಹು ತ್ತದ ಗುಡಿಯಂತಲೂ ಹೆಸರಾಗಿ, ಅಲ್ಲೆ ದೇವಸ್ಥಾನವು ನಿರ್ಮಾಣವಾಗಿರುವದು. ಅಲ್ಲಿಂದ ಪುನಃ ಪ್ರಮಥ ಸಂದೋಹವು ಮುಂದಕ್ಕೆ ಗಮಿಸುವ ಕಾಲದಲ್ಲಿ ಘೋ ರರೂಪವಾದ ಬ್ರಹ್ಮರಾಕ್ಷಸಿಯೋರ್ವಳು ಎದುರಿಗೆ ಬಂದು ನಿಲ್ಲಲಾಗಿ, ಆ ರಾಕ್ಷಸಿ ಯಂ ಕಂಡು, ಶ್ರೀಮಚ್ಚನ್ನಬಸವ ದೇವರು ನೀನು ಇಲ್ಲಿಯೇ ಕಾವಲಾಗಿ, ಅಳಿಯ ಬಿ ಜ್ಜಳನು ಸಂಡಿಸೂಡನೆ ಬಂದದ್ದಾದರೆ, ಅವನಂ ಬಿಡದೆ ತಡಿಯಬೇಕೆಂದು ಆಜ್ಞಾಪಿ

ಸಲಾ ರಾಕ್ಷಸಿಯು ಅಲ್ಲೇ ಕಾವಲಾಗಿರ್ದಳು. ಚನ್ನಬಸವದೇವರೂ ಪ್ರಮಥರೂ ಒಂದು ಪರ್ವತವನ್ನೇರಿ ನಿಲ್ಲುತ್ತಿರುವಷ್ಟರಲ್ಲಿ, ಅಳಿಯ ಬಿಜ್ಜಳನು ಮಹಾ ಸೈನ್ಯದೊಂದಿಗೆ ಆದೇಪರ್ವತದಬಳಿಯಲ್ಲಿ ಬರಲು, ರಾಕ್ಷಸಿಯು ಕಂಡು ಕಠೋರವಾದ ಧ್ವನಿಯಿಂದ ಘರ್ಜಿಸಲು, ಅಳಿಯಬಿಜ್ಜಳನಸೈನ್ಯವೆಲ್ಲಾ ಚೆದರಿತು. ಅಳಿಯಬಿಜ್ಜಳನಹೃದಯದಲ್ಲಿ ಭಯವು ನೆಲೆಗೊಂಡು ನಿಲ್ಲಲು ಆ ದಾರಿಯಂಬಿಟ್ಟು, ಕೆಲವು ದೂರಕ್ಕೆ ಸೈನ್ಯವೆಲ್ಲಾ ತೆರಳಿ, ಶಿವಶರಣರಿರುವ ಆ ಬೆಟ್ಟದ ಉತ್ತರದಿಗ್ಭಾಗದಲ್ಲಿ " ಅಗ್ನಿಯನ್ನಿರುವೆಗಳಾಪರಿಸುವಂತೆ " ಏರಲುಪಕ್ರಮಿಸಲು, ಆ ಪ್ರಮಥ ಗಣಂಗಳಲ್ಲಿ ಶರಣಾಗ್ರಗಣ್ಯನಾದ ಕಿನ್ನರಿಬ್ರಹ್ಮಯ್ಯನು ಆ ಸೈನ್ಯವನ್ನೆಲ್ಲಾ ತಡೆದು, ಆ ಪರ್ವತದಸುತ್ತಲೂ, ಆವರಿಸುವಂತೆ ಒಂದು ಜಲಮಯವಾದ ನದಿಯನ್ನು ನಿರ್ಮಿಸಲು, ನಿರುಪಾಯರಾಗಿ ಕೋಪದಿಂ ಬೆಟ್ಟದಬುಡದಲ್ಲಿ ನೊಣಗಳು ಗುಣುಗುಟ್ಟುವಂತೆ ಗುಣಗುಟ್ಟಿ, ಶಿವಶರಣರನ್ನು ತಡಿಯಲು ಯಾವಮಾರ್ಗವನ್ನು ಕಾಣದೆ, ಅಳಿಯಬಿಜ್ಜಳನು ಹಿಂದಿರುಗಿ ತನ್ನ ರಾಜಧಾನಿಗೆ ತೆರಳಿದನು. ಆ ಬೆಟ್ಟಕ್ಕೆ ಜಗಳದಬೆಟ್ಟವೆಂತಲೂ, ರಾಕ್ಷಸಿಯು ಬೆಟ್ಟವೆಂತಲೂ ಈಗಲೂ ಹೆಸರಾಗಿರುವದು. ಆ ರಾಕ್ಷಸಿಯು ಸೈನ್ಯವನ್ನು ಹಿಂದಕ್ಕೋಡಿಸಿ, ಬಂದೆನೆಂದು ಚನ್ನಬಸವಣ್ಣನವರಿಗೆ ಅರಿಕೆಯಂ ಮಾಡಿಕೊಳ್ಳಲು, ಪ್ರತಿವರ್ಷವೂ ಉಳವೀಕ್ಷೇತ್ರದಲ್ಲಿ ನಿನ್ನ ರಥೋತ್ಸಹವು ಮುಂಚಿತವಾಗಿ ನಡೆಯುವದೆಂದಪ್ಪಣೆಯನಿತ್ತು, ಅಲ್ಲಿಂದ ಉಳುವಿಯೆಂಬ ಮಹಕ್ಷೇತ್ರಕ್ಕೆ ತೆರಳಲಾಗಿ, ಹನ್ನೆರಡುಸಾವಿರ ದಂಡಿನಿಂದವರೊಡನೈತಂದ ಮಲ್ಲೂಖಾನನು ಚನ್ನಬಸವೇಶ್ವರರಂ ಕುರಿತು ದೇವಾ, ತಾವು ಕೈಲಾಸಾರೋಹಣವಂ ಮಾಡುವವರಾದ್ದರಿಂದ, ನಿಮ್ಮಡಿದಾವರೆಗಳ ಸೇವಕನಾದ ನನಗೆ ಮುಂದೇನುಗತಿ? ಎಂದು ನಮಸ್ಕರಿಸಿ, ನನಗೇನಪ್ಪಣೆಯೆಂದು ಪ್ರಾರ್ಥಿಸಲದಕ್ಕೆ ಶ್ರೀಮಚ್ಚನ್ನ ಬಸವಣ್ಣನವರು ಆ ಮಲ್ಲೂಖಾನನೆಂಬ ಸರದಾರನ ವಶಕ್ಕೆ ನವರತ್ನ ಖಚಿತವಾದದ್ದೊಂದು ಭಂಗಾರದ ಸಿಂಹಾಸನವನ್ನೂ, ಕೈಲವೆಂಬದೊಂದು ಮಹಿಮಾಮುದ್ರೆಯುಂಗರವನ್ನೂ, ಪ್ರಣಮಯವಾದ ಶಿಖಾ ಎಂಬದೊಂದು ಪವಿತ್ರವಾದ ವಸ್ತುವನ್ನೂ, ಕೊಟ್ಟು, ಆ ವಜೀರನ ಪುಸ್ತಕದಲ್ಲಿ ಈ ಮೂರೂ ಪದಾರ್ಥಗಳನ್ನು ಕಲಿಶಕೆಳಂಗಿ ನೆಯರಾಕ್ಷಸಸಂವತ್ಸರದಲ್ಲಿ ಕೊಟ್ಟಿರುವದೆಂಬದಾಗಿ ದಾಖಲೆಯನ್ನು ಬರಿಸಿ, ಎಲೈ— ವಜೀರನೇ, ನೀನು ಇಲ್ಲಿಂದ ದಿಲ್ಲಿಗೆ ಹೋಗುವನಾಗು. ಆ ದಿಲ್ಲಿಯ ಬಾದಶಹನೇ ನೀನಾಗುವಿಯೆಂದು ಆಶೀರ್ವಾದವನ್ನಿತ್ತು, ಹಾಗೆ ನೀನು ಬಾದಶಹನಾಗಿ, ಸುಖದಿಂದಿರುವ ಕೆಲವು ಕಾಲದಲ್ಲಿ, ಮಹಿಮಾಪುರುಷರಾಗಿಯೂ, ಅನೇಕ ಮಹತ್ವಂಗಳನ್ನುಂಟುಮಾಡುವವರಾಗಿಯೂ, ಇರುವ

ನಮ್ಮ ಶಿವಯೋಗಿಗಿಗಳೆಲ್ಲೋರ್ವರು ಶಿವ ಸ್ವರೂಪದಿಂದೆ ನಿನ್ನ ಪಟ್ಟಣಕ್ಕೆ ಬಿಜಯಂಗೈಸಿ, ಮಹತ್ವವನ್ನುಂಟುಮಾಡಿ, "ಶಿಖಾ, ಶೈಲ ಸಿಂಹಾಸನಗಳನ್ನು" ಯಾರು ಕೇಳುವರೋ? ಅವರ ವಶಕ್ಕೆ ಕೊಡತಕ್ಕದ್ದೆಂದು ನಿರೂಪಿಸಿದರು. ಆ ನಂತರ ಶ್ರೀಚನ್ನಬಸವೇಶ್ವರ ದೇವರು ಅಲ್ಲೆ ಘನಪರ್ವವೆಂಬ ಮಹಾ ಗಣಾರಾಧನೆಯನ್ನು ಮಾಡಿ, ಎಲ್ಲಾ ಶಿವಶರಣರಂ ಕುರಿತು— ನಮ್ಮ ಸಂಗಡ ಬರತಕ್ಕಂಥವರು ಬರತಕ್ಕದ್ದು; ಮತ್ತು ತಮ್ಮ ಇಷ್ಟವಿದ್ದಕಡೆಗೆ ಹೋಗತಕ್ಕವರು ಹೋಗತಕ್ಕದ್ದೆಂದು ಪೇಳಿದ ಕೂಡಲೇ ತಮ್ಮ ಕೂಡಾಗಮಿಸಿದ ಪ್ರಮಥ ಗಣಂಗಳೊಡನೆ ಶ್ರೀಮಚ್ಚನ್ನಬಸವ ದೇವರು ಹೊನ್ನರಳಿಯ ಮರಕ್ಕೆ ಚಿನ್ನದುಯ್ಯಾಲೆಯಾದ ಚಿನ್ನದ ತೊಟ್ಟಿಲವಂ ಕಟ್ಟಿಸಿ, ಅದರಲ್ಲೆಲ್ಲರೂ ಮಂಡಿಸಿ, ಕೆಳಗಿರುವ ಕೆಲವು ಗಣಂಗಳಿಗೆ ತೂಗಿರೆಂದು ಪೇಳಲಾಗ ಣಂಗಳು ತೂಗಲು, ಗಗನಕ್ಕೆಹಾರಿ ಕೈಲಾಸವಂ ಶೇರಿದರು.

ಉಳವಿಯೆಂಬ ಮಹಕ್ಷೇತ್ರದಲ್ಲಿ ಶ್ರೀಚನ್ನಬಸವಣ್ಣನರ ಮಠವೂ, ಹೊನ್ನರಳಿಯ ಮರವೂ, ಮಹಾಮನಿಯೆಂಬ ಶಿವಶರಣ ಪ್ರಮಥ ಗಣಾಧೀಶ್ವರರು ಶೇರಿದ ಅಪಾರವಾದ ಒಂದು ಗವಿಯೂ, ಹರಳಯ್ಯನವರ ಚಿಲುಮೆಯುಂಬಗ್ಗಣಿಯ ಕೊಣಾವೂ, ಅಕ್ಕನಾಗಮ್ಮನವರ ಗವಿಯೂ, ವಿಭೂತಿಯ ಬೆಟ್ಟವೂ, ಇನ್ನೂ ಅನೇಕ ಮಹತ್ವವಾದ ಸ್ಥಳಂಗಳೂ, ಈಗಲೂ ಇರುವವು.

ಪ್ರತಿವರ್ಷ ಮಾಘಮಾಸದ ಪೌರ್ಣಿಮಾ ದಿನದಲ್ಲಿ, ಮಘಾ ನಕ್ಷತ್ರದೋಳುಳವಿಯೆಂಬ ಕ್ಷೇತ್ರದಲ್ಲಿ ಮಹಾ ಜಾತ್ರೆಯು ನೆರೆದು, ಶ್ರೀಚನ್ನಬಸವೇಶ್ವರ ದೇವರ ರಥೋತ್ಸಹವು ನೆರವೇರುವದು ಜಾತ್ರೆಯ ಕಾಲದಲ್ಲಿ ಶ್ರೀಮಚ್ಚಿನ್ಮಲಾದ್ರಿ ಬೃಹನ್ಮಠದ ಮಹಾ॥ ॥ ಸ್ವಾಮಿಗಳವರಿಂದ ಕಾಣಿಕೆಯ ವಸೂಲಿಗಾಗಿ, ಚರಮೂರ್ತಿಗಳೂ ಕಾರಭಾರಿಗಳೂ, ಪ್ರತಿ ವರ್ಷದಲ್ಲಿಯೂ ನೇಮಿಸಲ್ಪಡುವರು. ಸಮಸ್ತ ವೀರಶೈವ ಜನರಿಗೆ ಈ ಮಹಾಸ್ಥಾನವು ಪುಣ್ಯಕ್ಷೇತ್ರವಾಗಿರುವದು. ಶ್ರೀಚನ್ನಬಸವೇಶ್ವರ ದೇವರು ಕಲಿ ಶಕೆ ೪೦೦೧ ಶಾಲಿವಾಹನಶಕೆ ೮೨೨ ರೌದ್ರಿ ಸಂವತ್ಸರದಲ್ಲಿ ಪ್ರಧಾನ ಪಟ್ಟವನ್ನಾಳಿ, ಮೂರೂವರಿ ತಿಂಗಳ ನಂತರ ಕೈಲಾಸಾರೋಹಣರಾಗುವ ಕಾಲಕ್ಕೆ ಮುಂಪೆ ತಮ್ಮ ಶೂನ್ಯ ಸಿಂಹಾಸನಕ್ಕೆ ಯರಗಂಬಳಿ ಸಿದ್ಧೇಶ್ವರ ಸ್ವಾಮಿಗಳು ಬರುವರೆಂದು, ಭವಿಸ್ಯವನ್ನು ಹೇಳಿದ್ದರು.

॥ ಶ್ರೀಮತ್ತೋಂಟದಾರ್ಯ ಸಿದ್ಧೇಶ್ವರಾಯನಮಃ. ॥

# ವಿನೋಪತ್ರ.

ಮ. ವಿ. ವೃತ್ತ

ಮದನಂ ಭೂಮಿಯೊಳಿರ್ಪ ಯೋಗಿ ಜನರಂ ಪೂಬಾಣದಿಂ ಪೀಡಿಸ ।
ಲ್ಮದನಾರೀಶ್ವರ ಕೋಪದಿಂದುರುಹಿದಂ ಗೋವಿಂದ ಸಂಭೂತನಂ ॥
ಮುದದೊಳ್ಗಾತ್ರ ವಿಹೀನ ಮೀನ ರಥನಾಗಲ್ಸೇರುತಾ ಮರ್ತ್ಯರಾ ।
ಹೃದಯಾಂತರ್ಯದಿ ವಾಸಿಸುತ್ತ ಬಿಡದೇ ತಾನಿರ್ದನಾಗಲ್ಗಡಾ ॥ ೧ ॥

ಚ. ಮಾ. ವೃ.

ರತಿಪತಿ ಪೂರ್ತಿ ಧಾತ್ರಿಯೊಳೆ ಗಾತ್ರ ವಿಹೀನದೊಳಿರ್ಪುದಂದು ಮಾ ।
ಪತಿ ವಿಲಸಚ್ಚರಿತ್ರ ವಿಧು ಶೇಖರ ನೊಯ್ಯನೆ ಜ್ಞಾನ ದೃಷ್ಟಿಯಿಂ ॥
ಪತಿ ಶಯಮಾದ ಪೂರ್ಣ ಖತಿಯಿಂ ಬಿಡದೀಕ್ಷಿಸಿ ಬಂದನುರ್ವಿಗೇ ।
ಕ್ಷಿತಿಜರ ಕಾರ್ಯ್ಯ ಕಾರಣದಿ ಧಾರುಣಿಯೊಳವತಾರವೆತ್ತುತೇ ॥ ೨ ॥

ಶಾ. ವಿ. ವೃ.

ಶ್ರೀಮದ್ದೇವರ ದೇವ ಧಾರುಣಿ ತಳಕ್ಕೈತಂದು ಭಕ್ತೌಘದೊಳ್ ।
ಪ್ರೇಮಾವಾಸ ಯತೀಶ ಮಾಯ ನಿರಸಂ ಸಿದ್ಧೇಶ ನಾಮಾನ್ವಿತಂ ॥
ಕಾಮೇತ್ಯಾದಿ ಕುವರ್ಗ ಭೂರುಹ ಕುಠಾರಪ್ರಾಯ ಯೋಗೀಶ್ವರಂ ।
ಸೋಮಾರ್ಕಾನಲನೇತ್ರ ಶಂಕರ ಸಮಂ ತಾನಿರ್ಪ ಸಾನಂದದಿಂ ॥ ೩ ॥

ಶ್ರೀ ಶಂಕರನು ಕೈಲಾಸದಲ್ಲಿ ಪಾರ್ವತಿ ಸಹ ಸಕಲ ದೇವರ್ಕಳಿಂಗಳಿಂದೊಡ್ಡೋಲಗಂ ಗೊಟ್ಟು ಕುಳಿತಿರಲ್ಕೆ, ನಾರದ ಋಷಿಯು ಶಿವಸಭೆಗೆ ಬಂದು, ಶಿವನಿಗೆ ಸಾಷ್ಟಾಂಗ ನಮಸ್ಕಾರವಂ ಮಾಡಿ ಸುತಿಸಿ, ದೇವರದೇವಾ, ಭೂಲೋಕದಲ್ಲಿ ಜೈನ ಚಾರ್ವಾಕಾದಿ ಜನರು ಹೆಚ್ಚಿ, ಶಿವಮತವನ್ನು ನಿಂದಿಸುವರೆಂದು ಪೇಳಲ್ಕಾಶಂಕರನು ಭೂಮಿಗೆ ಯಾವ ಗಣಾಧೀಶ್ವರರನ್ನು ಕಳುಹ ಬೇಕೆಂದಾಲೋಚಿಸುತ್ತಿರಲು, ವೃಷಭೇಶ್ವರನದಕ್ಕೆ ಎನ್ನ ಹೃನ್ನಿಲಯನಾದ ಅನಾದಿ ನಿರಂಜನ ಜಂಗಮವೇ ಭೂಲೋಕಕ್ಕೆ ತೆರಳುವನೆಂದು ಪೇಳುತ್ತಿರುವಷ್ಟರಲ್ಲಿ, ಆ ಬಸವೇಶ್ವರನ ಹೃದಯದಿಂದೆ ದಿವ್ಯ ತೇಜೋಮಯ ಮೂರ್ತಿಯು ಬಂದು, ಏನಪ್ಪಣೆಯೆಂದು ಕೇಳಲಾಪರಶಿವನು ನಾರದನ ಪ್ರ

ತ್ತಾಂತವನ್ನು ತಿಳಿಪಿ, ಭೂಲೋಕಕ್ಕೆ ತೆರಳಿ ಪರವಾದಿಗಳಂ ಜೈಸಿ, ಶಿವಮತವನ್ನುದ್ಧರಿಸುವದೆಂದಾಜ್ಞೆಯನ್ನೀಯಲು, ಶ್ರೀಸಿದ್ಧಲಿಂಗದೇವರೆಂಬ ಪೆಸರನ್ನಾಂತು ಶಿವನೆ ಭೂಮಿಗೆ ಬಂದಂತೆ ಬಂದು, ಜನರ ಮನದೊಳಗಿನ ಮಾರನನ್ನೋಡಿಸುತ್ತಾ ಅನೇಕ ಪರವಾದಿಗಳನ್ನು ಜೈಸುತ್ತಾ, ಶಿವಮತವನ್ನು ವೃದ್ಧಿಗೊಳಿಸುತ್ತಾ ಲೋಕಸಂಚಾರಿಗಳಾಗಿ, ಕಗ್ಗೇರಿಯೆಂಬ ಗ್ರಾಮದ ಬಳಿಗೆ ಬಿಜಯಂಗೈಸಿ, ನಾಗಿಣಿಯೆಂಬ ನದಿಯ ಹತ್ತಿರಬರಲು, ಆ ನದಿಯು ವಿಕಸನವಾದನೇಕ ಕಮಲಂಗಳಿಂದಲೂ, ಝೇಂಕರಿಸುವ ಭ್ರಮರಾಳಿಯಿಂದಲೂ, ಹಂಸ-ಚಕ್ರವಾಕ-ಮಯೂರಾದಿ ಪಕ್ಷಿಜಾಲದ ಕಲಕಲಾಟದಿಂದಲೂ, ಮಾಮರಾದಿ ವೃಕ್ಷಗಳ ಸಂದಣಿಯಿಂದಲೂ ಆ ಮಹಾ ಸ್ವಾಮಿಗಳನ್ನೆದುರುಗೊಳ್ಳುವಂತೆ ಶೋಭಿಸಿತು. ಆ ನದಿಯಲ್ಲವರು ಸ್ನಾನಂಗೈದು, ಶಿವಪೂಜೆಯಂ ಮಾಡಿಕೊಂಡು ಮೂರ್ತಂಗೊಂಡಿರುತ್ತಿರಲಿಕ್ಕೆ ಆ ಗ್ರಾಮದ ಭಕ್ತಾಗ್ರಗಣ್ಯನಾಗಿಯೂ, ಸಾಧು ಸಜ್ಜನ ಸಲ್ಲಕ್ಷಣಯುತನಾಗಿಯೂ ಇರುವ ನಂಬೆಣ್ಣನೆಂಬ ಶೆಟ್ಟಿಯು ಅನೇಕರನ್ನೊಡಗೊಂಡು ಬಂದು, ಆ ಸಿದ್ಧೇಶ್ವರ ಸ್ವಾಮಿಯವರ ದರ್ಶನವಂ ತೆಗೆದುಕೊಂಡು, ಸಾಷ್ಟಾಂಗ ನಮಸ್ಕಾರವನ್ನೆಸಗಿ, ಪ್ರಾರ್ಥಿಸಿ ನನ್ನ ಬಿನ್ನಹವನ್ನು ಕೈಕೊಳ್ಳಬೇಕೆಂದು ಕಾಣಿಕೆಯನ್ನೂ, ವಿಭೂತಿಯನ್ನೂ ಇಡಲದಕ್ಕೆ ಸ್ವಾಮಿಯವರೊಪ್ಪಿ, ಇವಕ್ಕೂ ಮೊದಲು ಭಕ್ತಾದಿಗಳು ಮಾಡಿದ ಬಿನ್ನಹವನ್ನು ಮೊದಲು ಕೈಕೊಳ್ಳುತ್ತೇವೆಂದು ಶೆಟ್ಟಿಗೆಪೇಳಿ, ಕೆಲವು ದಿನಗಳು ಕಳೆದನಂತರ ಆ ನಂಬೆಣ್ಣಶೆಟ್ಟಿಯೂ, ಗೌಡನೂ, ಇನ್ನು ಕೆಲವು ಸದ್ಭಕ್ತಾದಿಗಳೊಡನೆ ಸ್ವಾಮಿಯವರು ಪುರಬಾಹ್ಯ ಪ್ರದೇಶಕ್ಕಾಗಮಿಸಿ, ಅಲ್ಲೊಂದು ಅಂದವಾದ ತೋಟದೊಳು ಪೊಕ್ಕು ಮಾವಿನ ಮರದಡಿಯಲ್ಲಿ ವಿರಾಜಮಾನರಾದರು. ಆ ವನದಲ್ಲಿ ಅನೇಕ ಸುಗಂಧ ಮಯವಾಗಿರುವ ಪುಷ್ಪಗಳರಳಿ ಭೃಂಗ ಸುಝೇಂಕಾರ ರವದಿಂದೆ ಆ ಮಹಾ ಸ್ವಾಮಿಯವರನ್ನು ಸ್ತುತಿಸುವವೋ! ಏನೋಯೆಂಬಂತೆ ಕಣ್ಗೊಪ್ಪುತ್ತಿರ್ದುವು. ಕೋಕಿಲೆಗಳು ಸ್ವಾಮಿಯವರ ಘನಮಹತ್ವವನ್ನು ಕೊಂಡಾಡುವಂತೆ ಕೂಗುತ್ತಿರ್ದುವು. ಅರಗಿಳಿಗಳು ಶಿವಯೋಗೀಶ್ವರರು ಈ ಉದ್ಯಾನ ವನಕ್ಕಾಗಮಿಸಿದ್ದಾರೆ; ನೀನು ಇಲ್ಲಿಗೆ ಸರ್ವಥಾ ಬರಕೂಡದೆಂದು ತಮ್ಮರಸನಾದ ಮನ್ಮಥನಿಗೆ ನುಡಿಗಳಿಂದೆ ಪೇಳುತ್ತಿರುವವನ್ನೋ? ಎಂಬಂತೆ ಮಾತಾಡುತ್ತಿರ್ದುವು. ಮಂದಮಾರುತನು ಮೆಲ್ಲನೆ ಸುಳಿದು ಅಲ್ಲಿರುವ ಎಲ್ಲಾ ಕುಸುಮಗಳ ಮಕರಂದ ಗಂಧದ ಭಾರವನ್ನು ಹೊತ್ತುಕೊಂಡು ಬಂದು, ಆ ಮಹಸ್ವಾಮಿಯವರ ಬಳಿಯಲ್ಲಿ ಚೆಲ್ಲಿ ಸುಗಂಧ ಮಯವನ್ನು ಮಾಡಿಬಿಟ್ಟನು. ಆ ವನದಲ್ಲಿರುವ ತೆಂಗು, ಹಲಸು, ಪೇರಲು, ಜಾಳೆ, ಮಾವು, ನೇರಲು ಮುಂತಾದ ವೃಕ್ಷಂಗಳು ಸ್ವಾ

ಮಿಯುವರ ಆದರಾತಿಥ್ಯಕ್ಕಾಗಿ ಫಲಗಳನ್ನು ಹೊತ್ತುಕೊಂಡು ನಿಂತಿರುವವೋ? ಎಂಬಂತೆ ಶೋಭಿಸಿದವು. ಪಕ್ಷಿಜಾಲಗಳು ಗಾಯನವನ್ನು ಮಾಡುವಂತೆ ಸ್ವಾಮಿಯುವರಿಗಾಗಿ ಇಂಪಾದ ಧ್ವನಿಯಂ ಮಾಡಿದವು. ಈ ಮೇರೆಗೆ ಆ ಉದ್ಯಾನ ವನವು ಮಾಡುವ ಶೇವೆಯನ್ನೋಡಿ, ಆ ಮಹಾ! ಸ್ವಾಮಿಯುರು ಆನಂದಭರಿತರಾಗಿ ಕುಳಿತಿರ್ದರು. ಸದ್ಭಕ್ತನಾದ ನಂಜೆಣ್ಣಶೆಟ್ಟಿ ಮುಂತಾದ ಭಕ್ತರೊಡನೆ ಶಿವಯೋಗಾನಂದಗೋಷ್ಠಿಯನ್ನಾಡುತ್ತಾ ಕೆಲವು ಹೇಳೆಯಾದ ಮೇಲೆ ಶ್ರೀಸಿದ್ಧಲಿಂಗ ಸ್ವಾಮಿಯುವರು ಆ ನಂಜೆಣ್ಣಶೆಟ್ಟಿ ಮುಂತಾದ ಭಕ್ತರನ್ನು ಕುರಿತು,— ಕೆಂಚರೊಡ್ಡರೆಂಬ ಬೇಡರು ನಿಮ್ಮೂರಿಗೆ ದಾಳಿಯನ್ನಿಡಲು ಬರುತ್ತಾರೆ; ಆದ್ದರಿಂದ ನೀವುಗಳೆಲ್ಲರೂ ಪರ ಗ್ರಾಮಕ್ಕೆ ತೆರಳಬೇಕೆಂದು ಪೇಳಿದ ಮಾಹಾ ಸ್ವಾಮಿಯುವರ ಮಾತು ಸಟೆಯಾಗದು; ನಾವುಗಳೆಲ್ಲರೂ ಪರಗ್ರಾಮಕ್ಕೆ ತೆರಳಬೇಕೆಂದಾಲೋಚಿಸಿ, ನಂಜೆಣ್ಣಶೆಟ್ಟಿ ಗಿರಿಯಣ್ಣಗೌಡ ಮುಂತಾದ ಭಕ್ತಮಾಹೇಶ್ವರರೆಲ್ಲಾ ತಂತಮ್ಮ ಸತಿಸುತಾದಿ ಸಂದೋಹದೊಡನೆ ಪರಗ್ರಾಮಕ್ಕೆ ತೆರಳಿ ಅಲ್ಲಿ ಸುಖದಿಂದಿದ್ದರು. ಇತ್ತಲಾ ಸಿದ್ಧಲಿಂಗೇಶ್ವರ ಸ್ವಾಮಿಯುವರು, ಆ ವನದ ಮಾವಿನ ಮರದಡಿಯಲ್ಲಿ ಕುಳಿತರು. ನಂಜೆಣ್ಣ ಶೆಟ್ಟಿಯು ಬಿನ್ನಹವನ್ನು ಮಾಡಿ ವಿಭೂತಿಯನ್ನು ಕೊಟ್ಟಿರುವನಾದ್ದರಿಂದ ಈ ಸ್ಥಳದಿಂ ನಾವು ಮತ್ತೆಲ್ಲಿಗೂ ಗಮಿಸ ಕೂಡದೆಂದು, ಅಲ್ಲಿಯೇ ತನ್ನಯ ಕರಸಳದೋಳ್ಮನ, ಭಾವ, ಕರಣಂಗಳೇಕೀಕರಿಸಿ ಅನಿಮಿಷ ದೃಷ್ಟಿಯಿಂದೀಕ್ಷಿಸುತ್ತೆ ತಾನೇ ತಾನಾಗಿ ಬೇರಿಲ್ಲದಚಲತ್ವದಿಂದೆ ಶಿವಯೋಗಾನಂದದಿಂದೊಪ್ಪಿದರು. ಆ ಬೇಡರು ದಾಳೀ ಬಂದು ಊರೆಲ್ಲಾರೂ ಇಲ್ಲದ್ದು ನೋಡಿ ತಿರಿಗಿದರು. ಕೆಲವು ಕಾಲದಮೇಲೆ ಸ್ವಾಮಿಯುವರ ಸುತ್ತಲೂ ಗುಡಿ ಕಟ್ಟಿದವೋ ಏನೋ ಎಂಬಂತೆ ಗೆದ್ದಲುಗಳು ಹುತ್ತವಂ ಗಟ್ಟಿದವು. ಸರ್ಪಗಳು ಬಹಳವಾಗಿ ಅವರ ಮೈಗಳಲ್ಲೆಲ್ಲಾ ವಾಸ ಮಾಡಿದ್ದರಿಂದ, ನಾಗಾಭರಣನೆಂದೆನಿಸಿದರು. ಸುತ್ತಲೂ ಗಿಡಗಂಟಿಗಳು ಬೆಳೆದವು. ನೀಳವಾಗಿ ಭೂಮಿಗಿಳಿದ ಅವರ ಜಡೆಯಲ್ಲಿಯೂ, ಗಡ್ಡದಲ್ಲಿಯೂ ಪಕ್ಷಿಗಳು ಗೂಡನ್ನಿಟ್ಟು ಮರಿಮಾಡುತ್ತಿರುವವು. ಹೀಗೆ ಅನೇಕ ಸಂವತ್ಸರಂಗಳು ಕಳೆದ ನಂತರ, ಕಗ್ಗೇರಿಯ ನಂಜೆಣ್ಣಶೆಟ್ಟಿ ಗಿರಿಯಣ್ಣಗೌಡ ಮುಂತಾದ ಭಕ್ತ ಮಾಹೇಶ್ವರರೆಲ್ಲಾ ಪುನಃ ತಮ್ಮ ಮೂಲಗ್ರಾಮಕ್ಕೆ ಬಂದು, ಹಾಳಾದ ಊರನ್ನು ಪುನಃ ಕಟ್ಟಿಸಿಕೊಂಡು ಎಲ್ಲರೂ ಸುಖದಿಂದಿರ್ದರು. ಆ ಗಿರಿಯಣ್ಣಗೌಡನ ಮನೆಯಲ್ಲಿರುವ ಗೋವುಗಳಲ್ಲೊಂದಾದ ಕಪಿಲೆಯೆಂಬ ಗೋವು ಪ್ರತಿದಿನದಲ್ಲಿಯೂ ಅಡವಿಯಲ್ಲಿ ಯಥೇಚ್ಛವಾಗಿ ಮನ ದಣಿಯುವಂತೆ ಮೇದು ತಿರಿಗಿ ಬ

ದುವಾನ್ಯೆ ಜಾಲವನ್ನು ಮೇಲಕ್ಕೆತ್ತಿ, ಕಾಲುಗಳನ್ನು ಕೆದರುತ್ತಾ ಆ ಸ್ವಾಮಿಯವ
ರಿರುವ ಹುತ್ತಕ್ಕೆ ಪೋಗಿ, ಹಾಲ್ಗರಿಯುತ್ತಲಿತ್ತು; ಗಿರಿಯಣ್ಣಗೌಡನ ಮನೆಯವ
ರು ರಾತ್ರಿ ಹಾಲು ಹಿಂಡುವದಕ್ಕೆ ಪೋಗಲು ಒದಿಯುತ್ತಿತ್ತು; ಅದನ್ನವರು ತಮ್ಮ
ಗೋವುಗಳನ್ನು ಕಾಯುವ ಬೇಡರ ಹುಡುಗನಾದೊಬ್ಬ ಗೋಪಾಲಕನನ್ನು ನ
ಮ್ಮ ಕಪಿಲೆಯೆಂಬ ಗೋವು ದಿನದಲ್ಲಿಯೂ ಹಾಲುಕೊಡದೆ ಒದೆಯುತ್ತಿರುವದು.
ಅಡವಿಯಲ್ಲಿ ಹಾಲನ್ನು ನೀನು ಕುಡಿಯುತ್ತಿರಬಹುದೆಂದು ಕೇಳಲು, ಅದಕ್ಕೆ
ಆ ಗೋಪಾಲಕನು ಸರ್ವಥಾ ನಾನು ಹಾಲು ಕುಡಿದಿಲ್ಲವೆಂದು ಹೇಳಿದನು. ಮ
ತ್ತೆರಡು ಮೂರು ದಿನಗಳವರೆಗೂ ನೋಡಲು, ಹಾಲನ್ನು ಕೊಡದೆ ಇರುವದ
ರಿಂದ ನಾನಾತರವಾಗಿ ಮಾತಾಡುತ್ತಾ, ಮನೆಯ ದೇವರಿಗೆ ಮಿಾಸಲನ್ನು ತೆಗೆ
ದು ನೋಡಿದಾಗ್ಯೂ, ಹಾಲನ್ನು ಕೊಡದೆ ತನ್ನ ನೇಮದಂತೆ ಪ್ರತಿದಿನವೂ ಮ
ಹಾಸ್ವಾಮಿಯವರ ಹುತ್ತದ ಮೇಲೆ ಹಾಲ್ಗರಿಯುತ್ತಿರುವ ಸಂಗತಿಯು ಯಾರಿ
ಗೂ ಗೋಚರಿಸದೆ ಇತ್ತು. ಕೆಲವು ದಿನಗಳ ಮೇಲೆ ನಂಬೆಣ್ಣಶೆಟ್ಟಿಯು ಶಿವಪೂ
ಜೆಗೆ ಹೂವುಗಳನ್ನು ತರುವದಕ್ಕಾಗಿ, ಆ ತೋಟದೊಳಪೊಕ್ಕು ನೋಡುವಲ್ಲಿ, ಒಂ
ದು ಆಕಳು ಮಾವಿನ ಮರದಡಿಯಲ್ಲಿ ಹುತ್ತದ ಮೇಲೆ ಹಾಲ್ಗರೆಯುವದನ್ನು ಕಂ
ಡನು. ಇದೇನಾಶ್ಚರ್ಯವೆಂದು ಆ ಹುತ್ತದ ಬಳಿಗೆ ಬಂದು ನೋಡುತ್ತಿರುವಲ್ಲಿ,
ಪೆಳೆಯೊಳಗೆ ಮಲಗಳು ಮನೆಮಾಡಿಕೊಂಡಿದ್ದವು. ಸರ್ಪಗಳು ಹೆಡೆಯನ್ನು ತೆ
ಗೆದು ಆಡುತ್ತಿದ್ದವು. ಇವುಗಳಂ ನೋಡುತ್ತ ಮತ್ತಷ್ಟು ಹತ್ತರ ಹೋಗಿ ನೋ
ಡಲು, ಗಡ್ಡದೊಳಗೆ ಸಣ್ಣಸಣ್ಣ ಪಕ್ಷಿಗಳು ಗೂಡುಗಳನ್ನಿಟ್ಟಿರುವವು; ಇಂಥಾ ಆ
ಪರಮ ಎತೀಶ್ವರನನ್ನು ಕಂಡು, ಬಹಳ ಸಂತುಷ್ಟನಾಗಿ ಊರೊಳಗಿರುವ ಸಕ
ಲ ಭಕ್ತ ಮಾಹೇಶ್ವರರನ್ನೂ, ಗಿರಿಯಣ್ಣಗೌಡನನ್ನೂ ಸಹ ಕರೆಸಿಕೊಂಡು, ಆ
ಯತೀಶ್ವರರ ಸುತ್ತಲೂ ಬೆಳೆದಿರುವ ಹುಲ್ಲು ಗಿಡಗಂಟೆಗಳನ್ನು ತೆಗೆಸಿ, ಸರ್ವರಿ
ಗೂ ಆ ಮೂರ್ತಿಯನ್ನು ತೋರಿಸಲಾಗಿ, ಎಲ್ಲರೂ ಆನಂದ ಮಯರಾದರು;
ಮತ್ತು ಭೂಲೋಕದಲ್ಲಿದು ಹೊಸ ಕೌತುಕವೆಂದು ಸ್ತುತಿಸಿದರು. ಕಣ್ಣು ಮು
ಚ್ಚಿಕೊಂಡು ಶಿವಯೋಗಾನಂದದಿಂದೆ ಮಂಡಿಸಿರುವ, ಈ ಶಿವಯೋಗಿಗಳನ್ನು ಎ
ಬ್ಬಿಸುವ ಬಗೆ ಹೇಗೆಂಪಾಲೋಚಿಸಿ, ನಾನಾತರವಾದ ಪಂಚ ವಾದ್ಯಗಳಂ ತರಿ
ಸಿ, ನಾದವಂ ಗೈಯ್ಯಿಸಲಾಗಿ, ಆ ಮಹಾಸ್ವಾಮಿಗಳು ಶಿವ ಸಮಾಧಿ ಯೋಗವ
ನ್ನು ತಿಳಿದು ಕಣ್ದೆರೆಯಲು, ಜನಗಳೆಲ್ಲಾ ಜಯಘೋಷವಂ ಮಾಡುತ್ತಾ, ದೀ
ನೋದ್ಧಾರಾ, ಭಕ್ತವತ್ಸಲಾ, ಜನನ ಮರಣ ವಿರಹಿತಾ, ಶಂಕರಾ ಜಯ ಜಯ

ವೆನುತ್ತ ಕೊಂಡಾಡಿ, ನಮಸ್ಕರಿಸಿ, ಪರಮಾನಂದದಿಂದ ಕುಣಿದರು. ಅನಂತರ ಹುತ್ತವನ್ನು ತೆಗೆಯುವದಕ್ಕಪ್ಪಣೆಯಾಗಬೇಕೆಂದು ಸ್ವಾಮಿಗಳಂ ಕುರಿತು ಪ್ರಾರ್ಥಿಸಲು, ಗಡ್ಡದಲ್ಲಿ ಪಕ್ಷಿಗಳು ಮರಿಗಳನ್ನಿಟ್ಟಿರುವವು; ಇನ್ನು ಎಂಟು ದಿವಸಗಳಲ್ಲಿ ಬಲಿತು ಅವುಗಳೆಲ್ಲಾ ಹೋದನಂತರ, ತೆಗೆಯಿಸತಕ್ಕದ್ದೆಂದು ಅಪ್ಪಣೆಯಂ ಮಾಡಲು, ಆದರಂತೆ ಎಂಟು ದಿವಸಗಳು ಕಳೆದ ನಂತರ, ನಂಜಿಣ್ಣಶೆಟ್ಟಿ ಮೊದಲಾದ ಭಕ್ತ ಮಾಹೇಶ್ವರರೆಲ್ಲಾ ಬಂದು, ಆ ನಂಜಿಣ್ಣಶೆಟ್ಟಿಯು ಏಳುನೂರು ಬಿಂದಿಗೆ ಗೋಕ್ಷೀರವಂ ತರಿಸಿ ಹುತ್ತದ ಮೇಲೆರೆಯಲಾಗಿ, ಹುತ್ತವೆಲ್ಲಾ ಕರಗಿ ಭೂಮಿಯ ಲ್ಲೊರಗಿತು. ಬಳಿಕ ಸ್ವಾಮಿಯವರಿಗೆ ಮಂಗಳ ಸ್ನಾನವಂ ಮಾಡಿಸಿ, ಮಡಿಯಂ ಪೊದಿಸಿ, ಪಲ್ಲಕ್ಕಿಯಲ್ಲಿ ಕೂಡ್ರಿಸಿ, ಸಕಲ ಬಿರುದಾವಳಿಗಳೊಡನೆ ಸಂಭ್ರಮದಿಂದೆ ಶೆಟ್ಟಿಯು ಮನೆಗೆ ಬಿಜಯಂಗೈಸಿ, ಬಿನ್ನವಂ ತೀರಿಸಿ ಸಕಲರಿಗೆ ಆಶೀರ್ವಾದವಂ ದಯಪಾಲಿಸಿ, ಪುನಃ ಅರಣ್ಯಕ್ಕೆ ಹೊರಟು ಹೋದರು. ಇವರು ಅನೇಕ ಮಹತ್ವಗಳನ್ನುಂಟು ಮಾಡಿದ್ದಕ್ಕೆ ಇವರ ಪುರಾಣವೇ ಸಾಕ್ಷಿಯಾಗಿರುತ್ತದೆ. ಸಿದ್ಧೇಶ್ವರ ಪುರಾಣದ ಮೇಲಿಂದ ನೋಡಿದರೆ, ಇವರಿಗೆ ಸಿದ್ಧೇಶ್ವರರೆಂತಲೂ, ಸಿದ್ಧಲಿಂಗೇಶ್ವರರೆಂತಲೂ ಎರಡು ನಾಮಗಳಿದ್ದವೆಂದು ವ್ಯಕ್ತವಾಗುತ್ತದೆ. ೨೫೦ ವರ್ಷಗಳ ಪೂರ್ವದಲ್ಲಿರುವ ಎಳೆಂದೂರ ಶ್ರೀಷಡಕ್ಷರ ಕವಿಗಳು ಈ ತೋಂಟದಾರ್ಯರನ್ನು ವೃಷಭೇಂದ್ರ ವಿಜಯದಲ್ಲಿಯೂ, ರಾಜಶೇಖರದಲ್ಲಿಯೂ ಕೊಂಡಾಡಿರುತ್ತಾರೆ. ಇವರು ನೂರು ವರ್ಷಗಳವರೆಗೆ ಅಲ್ಲಲ್ಲಿ ಸಂಚರಿಸುತ್ತಾ ಇದ್ದು, ಕಡೆಯಲ್ಲಿ ನಿರಕ್ಷರ ಬೋಳ ಬಸವ ಸ್ವಾಮಿಗಳಿಗೆ ಷಟ್ಸ್ಥಲ ಸಿದ್ಧಾಂತವನ್ನೂ, ಸಕಲ ಶಾಸ್ತ್ರಾದಿಗಳನ್ನೂ ಬೋಧಿಸಿ, ಅವರಿಗೆ ತಮ್ಮಧಿಕಾರವನ್ನು ಕೊಟ್ಟು, ಎಡೆಯೂರೆಂಬ ಗ್ರಾಮದಲ್ಲಿ ಯೋಗ ಸಮಾಧಿಯನ್ನೈದಿದರು.

---

॥ ಶ್ರೀನಿರಕ್ಷರಬೋಳಬಸವಸ್ವಾಮಿನೇನಮಃ ॥

## ಷಿನೇಷ್ಟ್ರ.

ಉ, ಮಾ, ವೃ.

ಶ್ರೀ ಗುರು ಸಿದ್ಧಸ್ವಾಮಿಯುಪದೇಶದಿ ವೇದ ಮಿಮಾಂಸ ತರ್ಕ ಶಾ।
ಸ್ತ್ರಾಗಮ ವಿದ್ಯ ಬುದ್ಧಿಯುತರಾಗಿ ನಿರಕ್ಷರ ಬೋಳ ಸಂದಿಸ ॥

ದೀಕ್ಷೆಗೆ ವರೇಣ್ಯರೆಂಬ ಪೆಸರಂ ಪಡೆದೀವಿಭು ಭಕ್ತರಂ ಸದಾ ।
ರಾಗದಿ ಪಾಲಿಸೆಂದು ಶರಗಸ್ಸರೆ ನಾ ನಿರದೊಡ್ಡಿ ಬೇಡುವೇಂ ॥ ೧ ॥

ಈ ಮೂರನೇ ಪಟ್ಟವು ನಿರಕ್ಷರ ಬೋಳ ಬಸವೇಶ್ವರರೆಂಬ ಮಹಸ್ವಾಮಿಯವರಿಗಾಯಿತು ಇವರು ತಮ್ಮ ಗುರುಗಳಾದ ಶ್ರೀ ಮಜ್ಜಗದ್ಗುರು ತೋಂಟದಾರ್ಯರನ್ನ ವಿಶ್ವಾಸದಿಂದೇಕ ಚಿತ್ತರಾಗಿ, ಮಿಮಾಂಸ - ತರ್ಕ - ವ್ಯಾಕರಣಾದಿ ಶಾಸ್ತ್ರಂಗಳಲ್ಲಿಯೂ, ವೇದಾಗಮೋಪನಿಷದಾದಿ ಸಕಲ ವಿದ್ಯಂಗಳಲ್ಲಿಯೂ ಸಂಪೂರ್ಣ ಜ್ಞಾನವನ್ನುಂಟು ಮಾಡೆಂದು ಪ್ರಾರ್ಥಿಸಲು, ಆ ಶ್ರೀಮಜ್ಜಗದ್ಗುರುವರ್ಯರಾದ ಶ್ರೀಮತ್ತೋಂಟದಾರ್ಯರ ಅನುಗ್ರಹಾತಿಶಯ ಮಹತ್ವದ ಮೂಲಕ ಇಪ್ಪತ್ತೊಂದು ದಿವಸಗಳಲ್ಲಿಯೇ ಸಕಲ ವಿದ್ಯಾಧುರಂಧರರಾಗಿಯೂ, ವೇದಾಗಮೋಪನಿಷದ್ವ್ಯಾಕರಣ - ತರ್ಕ - ಮಿಮಾಂಸಾದಿ ಸಕಲ ಶಾಸ್ತ್ರ ವಿಶಾರದರಾಗಿಯೂ ಇದ್ದದಲ್ಲದೆ, ಏಳನೂರ ಚರಮೂರ್ತಿಗಳಿಗೂ, ಮೂರು ಸಾವಿರ ವಿರಕ್ತರಿಗೂ, ಜಗತ್ತಿಗೂ ಗುರುಗಳಾಗಿದ್ದರು; ಮತ್ತು ಶಾಸ್ತ್ರಂಗಳಂ ಪೇಳುತ್ತಾ ಲಿಂಗಾಂಗ ಸಾಮರಸ್ಯ ಭಾವಮಂ ಭಕ್ತರಿಗೆ ಬೋಧಿಸುತ್ತಾ, ಅನೇಕ ಮಹತ್ವಗಳನ್ನುಂಟು ಮಾಡುತ್ತಾ, ಪರವಾದಿ ಗಜಾಂಕುಶರಾಗಿಯೂ, ಶಿವೇತರ ಮತ ಮತ್ತು ಸಾಮಜ ಸಮೂಹಕ್ಕೆ ಸಿಂಹಪ್ರಾಯರಾಗಿಯೂ, ದೇಶಸಂಚಾರವನ್ನು ಮಾಡುತ್ತಾ, ವೈಷ್ಣವಾದಿ ಪರವಾದಿಗಳನ್ನು ವಾದದಲ್ಲಿ ಜೈಸುತ್ತಾ, ಶಿವಸಾಂಬ್ರಾಜ್ಯ ವೈಭವ ಶೀಲರಾಗಿ, ಭಕ್ತರಿಗೆ ಬೇಡಿದಿಷ್ಟಾರ್ಥವನ್ನೀಯುತ್ತಾ ಜಗದ್ಗುರುಗಳಾಗಿ, ತೊಂಭತ್ತಾರು ವರುಷದಾಯುಷ್ಯುಳ್ಳವರಾಗಿ, ಮದ್‌ಗಿರಿಯೆಂಬ ಗ್ರಾಮಕ್ಕೆ ಬಿಜಯಂಗೈಸಿ, ಶಿವನಲ್ಲಡಕವಾದರು. ಇವರ ತೋರಗದ್ದುಗೆಯು ಮೈಸೂರಸೀಮೆಯಲ್ಲಿರುವ ಮದ್‌ಗಿರಿಯಲ್ಲುಂಟು.

---

॥ ಶ್ರೀಗುರುಸಿದ್ಧವೀರಸ್ವಾಮಿನೇನಮಃ ॥

# ಛನ್ದೇಪದ್ಯ.

ಚ. ಮಾ. ವೃ.

ಶಿವಸಮಯಾಜ್ಞಿಸಾರ್ಯ ಶಿವಧರ್ಮಸುಸಾಗರಪೂರ್ಣಚಂದ್ರಸ ।
ತ್ಕವಿವರಸ್ತೋತ್ರಪಾತ್ರ ಶಿವಲಾಂಛನಧಾರಣ ಸಿದ್ಧವೀರಸ ॥

ತ್ಸ್ರವಿಮಳನಾಮವಾಂಶುಶಿವಭಕ್ತರಕಾಯುತೆ ಕರ್ಮಯಿಂಸದಾ ।
ಕುವಲಯಸಜ್ಜನೌಘತತಿಯುಂಬಿಡದೀಕ್ಷಿಸಿ ರಕ್ಷಿಸೈವಿಭೋ. ॥ ೧ ॥

ಶಿಲಿ ನ್ಯಸಿಂಹಾಸನದ ನಾಲ್ಕನೇಪಟ್ಟವು ಶ್ರೀಸಿದ್ಧವೀರಸ್ವಾಮಿಯಂಬವ ರಿಗಾಯಿತು. ಇವರು ಸಕಲಶಾಸ್ತ್ರಪ್ರವೀಣರಾಗಿಯೂ, ಗೀರ್ವಾಣಭಾಷಾಧುರಂಧರರಾಗಿಯೂ, ಶ್ರೀವೀರಶೈವಧರ್ಮ ಪಾರಾವಾರ ರಾಕಾ ಶಶಾಂಕ ಪ್ರಾಯರಾಗಿಯೂ, ಜಗದ್ಗುರುಗಳಾಗಿಯೂ, ಮಹಾತ್ಮಾತಿಶಯಯುತರಾಗಿಯೂ, ಸಾರ್ವಪಾತ್ರಿ ಶಿವಯೋಗಾನಂದ ಪರಿಪೂರ್ಣರಾಗಿಯೂ, ಭೂಲೋಕದಲ್ಲಿ ಸಾಕ್ಷಾಚ್ಛಿವಸ್ವರೂಪಿಗಳಾಗಿಯೂ ಇರುತ್ತಿದ್ದರು. ಇವರು ಪರವಾದಿಗಳನೇಕರನ್ನು ವಾದದಲ್ಲಿಜೈಸಿ, ಶ್ರೀಮದ್ವೀರಶೈವಮತವೇಶ್ರೇಷ್ಠವೆಂದುಸಿದ್ಧಮಾಡಿ ಬೋಧಿಸಿ, ಹನ್ನೆರಡುಸಾವಿರಜನರಿಗೆ ವೀರಶೈವಮತವನ್ನು ಸ್ವೀಕರಿಸುವಂತೆಮಾಡಿ, ಅವರಿಗೆ ಲಿಂಗಧಾರಣದೀಕ್ಷೆಯನ್ನಿತ್ತು ಸೀಲವಂತರನ್ನು ಮಾಡಿದರು. ಈಚೆಗೆ ಅನೇಕ ಮಹತ್ವಂಗಳನ್ನುತೋರಿ, ತೊಂಭತ್ತೆಂಟುವರ್ಷ ಬಾಳಿದವರಾಗಿದ್ದು, ಗುಮ್ಮಳಾಪುರದಲ್ಲಿ ಬೈಲಾದರು. ಇವರ ತೋರಗದ್ದುಗೆಯು ಗುಮ್ಮಳಾಪುರದಲ್ಲಿರುವದು.

---

ಶ್ರೀ ಗುರು ಸಿದ್ಧವೀರ ಸ್ವಾಮಿನೇನಮಃ.

# ಶಿನೇಪಟ್ಟ

ಮತ್ತೇಭವಿ ಕ್ರೀಡಿತ ವೃತ್ತ.

ಕರುಣಾ ಸಾಗರ ಸಾಂದ್ರ ಚಂದ್ರ ಕಿರಣಂ ಸರ್ಪಾಳಿ ಭಾಸ್ವದ್ಭಸಾ ।
ಭರಣಂ ಕಾಯಜನುಗ್ರದರ್ಪ ಹರಣಂ ತಾಯಾವಿ ಕೋಲಾಹಲಂ ॥
ವರ ಗೂಳೂರ ಸುಸಿದ್ಧವೀರ ಪೆಸರಂದಾಳ್ದಿರ್ದ ಯೋಗೀಶ್ವರಂ ।
ನಿರುತಾನಂದದಿ ಭಕ್ತರನ್ನು ಪೊರೆವಂ ಕಾರುಣ್ಯ ಶ್ರೀಸಾಗರಂ ॥ ೧ ॥

ಈ ಐದನೇ ಪಟ್ಟವು ಗೂಳೂರ ಶ್ರೀಸಿದ್ಧವೀರ ಸ್ವಾಮಿಗಳಿಗಾಯಿತು. ಇವರು ಗುಮ್ಮಳಾಪುರದಲ್ಲಿ ವಾಸಿಸುತ್ತಿದ್ದರು. ಈ ಪುರವು ಮೈಸೂರ ಸೀಮೆಯಲ್ಲಿರುವದು. ಆ ಗ್ರಾಮದ ಪೂರ್ವ ಪಶ್ಚಿಮ ಉತ್ತರ ದಕ್ಷಿಣ ದಿಕ್ಕುಗಳಲ್ಲಿ ಸಪ

ಲಿಂಗಮುದ್ರೆಗಳನ್ನು ಸ್ಥಾಪಿಸಿ, ಅಲ್ಲಿರುವ ಭಕ್ತರಿಗೆಲ್ಲಾ ಶಾಸ್ತ್ರಾನುಸಾರ ದೀಕ್ಷೆಯನ್ನು ಮಾಡಿಸಿ, ಭವಿಗಳಾರೂ ಗ್ರಾಮದಲ್ಲಿರಬಾರದೆಂದು ಸಂಸ್ಥಾನದವರಿಂದ ಕಟ್ಟಳೆಯಂ ಮಾಡಿಸಿ, ಸಿವಹೋಗಾನಂದ ವೈಭವದೊಡನೆ ಲಿಂಗಪೂಜಾ ಜಂಗಮ ದಾಸೋಹಗಳನ್ನು ನಿತ್ಯದಲ್ಲಿಯೂ ಮಾಡುತ್ತಾ, ಮಹತ್ವಾತಿಶಯದೊಡನೆ ವಿರಾಜಿಸುತ್ತಿದ್ದರು. ಇವರು ಒಂದು ನೂರು ವರುಷ ಭೂಮಿಯಲ್ಲಿದ್ದು ಬೈಲಾದರು. ಇವರ ತೋರ ಗದ್ದುಗೆಯು ಗೂಳೂರಲ್ಲಿರುವದು. ಇವರ ಮಹತ್ವಾತಿಶಯ ವರ್ಣನೆಯು ಇವರ ಹೆಸರಿನ ಪುರಾಣದಲ್ಲುಂಟು. ಈ ಸ್ವಾಮಿಗಳು ಬೈಲಾದನಂತರ ಐದು ವರುಷಗಳವರೆಗೆ ಪಟ್ಟವು ಯಾರಿಗೂ ಆಗಲಿಲ್ಲ.

---

ಶ್ರೀಗಗನದಾರ್ಯ ಸ್ವಾಮಿನೇನಮಃ

# ಶ್ರೀ ನೀಪತ್ರೈ

ಸ್ರಗ್ಧರಾ ವೃತ್ತ.

ವ್ಯೌನೀಶಂ ಪಾರದೂರ ಪ್ರಭು ಸಮಯ ಲಸದ್ವಾರಿಜಾತಾಬ್ಜ ಮಿತ್ರಂ।
ಸ್ವಾನಂದಾಬ್ಧಿ ಸ್ಥಿತಿ ಪ್ರೋದ್ವಿಳಸಿತ ನಿಜಯೋಗಾಂಗ ವಿಭ್ರಾಜ ಮಾನಂ॥
ತಾನೂರ್ವೀ ಭಕ್ತ ಸಂಸ್ಥಾದಿಗನವರತ ಲಿಂಗಾಂಗ ಜೀವೈಕ್ಯವಂ ।
ನಾಗಾರಿ ಬಾಣಸೋಲ್ಲೋರ್ವ ಪರಗಗನದಾರ್ಯಂ ಸದಾಬೋಧವೇಳ್ಗೆ॥

॥ ಕಂದ ॥ ಗುರು ಗಗನದಾರ್ಯ ನಿರುತಂ।
ಪರಿಪರಿಯಿಂದೆನ್ನ ಬರಿದೆ ಬಾಧಿಪ ಜನರಂ॥
ಪರಿಹರಿಸಿ ವೈರಿವಂಶವ।
ನಿರದುರುಹುತ್ತೀಗೆ ಮುದವಂ ಭರದಿಂಪೆಸಗೆ॥

ಶ್ರೀ ಗಗನದಾರ್ಯ ಸ್ವಾಮಿಗಳಿಗೆ ಪಟ್ಟವಾಯಿತು. ಇವರು ಪಾಗಡಿಯೆಂಬ ಪಟ್ಟಣದಲ್ಲಿ ಅರವತ್ತಾರು ವಿರಕ್ತಾಶ್ರಮದ ಮಠಗಳನ್ನು ಕಟ್ಟಿಸಿ, ಆ ಮಠಗಳಲ್ಲಿ ಯೋಗ್ಯರಾದ ನಿರಾಭಾರಿವೀರಶೈವ ಷಟ್ಸ್ಥಲದ ಮೂರ್ತಿಗಳನ್ನಿಟ್ಟರು. ಅಲ್ಲಿರುವ ಕೆಲವು ಭಕ್ತ ಜನಗಳಿಗೆ ಸದುಪದೇಶವನ್ನು ಮಾಡಿ, ಸದಾಚಾರ ಸಂಪನ್ನರಾಗುವಂತೆ ಮಾಡಿದರು. ಕ್ಷತ್ರಿಯನಾಚಾರ ಯುಕ್ತರಾದವರಿಗೆ ಬಹಿಷ್ಕಾರ ನಿ

ರೂಪಗಳನ್ನು ಜಾಹೀರ ಪಡಿಸಿದರು. ಆ ಬಹಿಷ್ಕಾರಯುತರನ್ನು ಆ ದೇಶದ ಸಂಸ್ಥಾನಾಧಿಪತಿಗಳು ಸಹ ಬಂಧನ ಪಡಿಸಿದ್ದರಿಂದಾಜನರು, ಅಪರಾಧ ಕಾಣಿಕೆಯನ್ನು ಸ್ವಾಮಿಯುವರಿಗೊಪ್ಪಿಸಿ, ಸ್ವಾಮಿಯುವರ ಅಜ್ಞಾನುಸಾರ ನಡೆಯುತ್ತೇವೆಂದು ಸಾಷ್ಟಾಂಗವಂ ಮಾಡಿ ಬೇಡಿಕೊಂಡ ಕಾರಣ ಅವರಿಗೆ ಶುದ್ಧ ನಿರೂಪಮಂ ದಯದಿಂದೆ ಕೊಟ್ಟು ಕಾಪಾಡಿದರು. ಆ ಮಾಗಡಿ ತಾಲೂಕಿನಲ್ಲಿರುವ ಮಠಸ್ಥರಿಗೆ ವೀರಶೈವ ಶಾಸ್ತ್ರಾನುಸಾರವಾಗಿ ಶಿವದೀಕ್ಷೆಯನ್ನಿತ್ತು, ಶಿವ ಮತೋದ್ಧಾರವಂ ಮಾಡುತ್ತಾ, ಸಕಲ ಶಿವಭಕ್ತ ಸಂಕುಳಕ್ಕೆ ವೀರಶೈವ ಧರ್ಮ ತತ್ವಂಗಳನ್ನುಪದೇಶಿಸುತ್ತಾ, ಶಿವಸಾಂಬ್ರಾಜ್ಯ ವೈಭವಯುಕ್ತರಾಗಿ, ಮಹಾತಿಶಯ ಮಹಿಮಾ ಪುರುಷರಾಗಿ, ಷಟ್ಸ್ಥಲ ಸನ್ಮಾರ್ಗಯುತರಾಗಿ, ತೊಂಭತ್ತೊಂಭತ್ತು ವರುಷವಿದ್ದು ಭೈರವನದುರ್ಗೆಂಬ ಗ್ರಾಮದಲ್ಲಿ ಬಯಲಾದರು. ಇವರ ತೋರ ಗದ್ದುಗೆಯು ಅದೇ ಗ್ರಾಮದಲ್ಲುಂಟು. ಇವರ ನಂತರ ಹನ್ನೊಂದು ವರುಷಗಳವರೆಗೆ ಪಟ್ಟವು ಯಾರಿಗೂ ಆಗದೆ ಹಾಗೆಯೇ ನಿಂತಿತು.

---

ಶ್ರೀಮತ್ಕಾಷ್ಟಪುರೀ ಸ್ವಾಮಿನೇನಮಃ

# ೭ನೇಪಟ್ಟ

ಉತ್ಸಾಹ ವೃತ್ತ.

ಕಾಷ್ಟ ಘೋಷ ಸಾಮವಾಂತು ಶುದ್ಧ ಭಕ್ತ ಬೃಂದಕಿಂ ।
ನಿಷ್ಠ ಪೂರ್ಣಮಾಡಿ ಶಾಸ್ತ್ರ ತರ್ಕದಿಂ ವಿಷ್ಣು ಜೈನ ॥
ಶ್ರೇಷ್ಠ ಶಾಸ್ತ್ರ ವಿದ್ಯವಂತಹಂ ಗೆಲ್ದುವರ್ಷಿ ತಾಣದೋ ।
ಶಿಷ್ಟ ಪಾಲ ಸೃಷ್ಟಿಮೂಲ ದೇವ ದೇವ ಸೊಪ್ಪಿದಂ ॥

ಈ ಏಳನೇ ಪಟ್ಟವು ಶಟಿಗಿಹಳ್ಳಿ ಸ್ವಾಮಿಯೆಂಬ ಶ್ರೀ ಜಗದ್ಗುರುಯತಿತತಿ ಚಕ್ರವರ್ತಿಯುವರಿಗಾಯಿತು. ಈ ಸ್ವಾಮಿಗಳ ಸನ್ನಿಧಿಗೆ ಸಂಪಾದನ ಸಿದ್ಧವೀರರೆಂಬ ಚರಮೂರ್ತಿಗಳು ಬಂದು, ತಮ್ಮಿಷ್ಟಲಿಂಗದ ಗೋಳಕವು ಅಗಲಿರುವದೆಂದು ಅರಿಕೆ ಮಾಡಿಕೊಂಡರು. ಅದಕ್ಕಾ ಸ್ವಾಮಿಗಳು ಕಂಥೆಯುಂಬಲಿಸಿ ಧರಿಸಿ ಕೊಳ್ಳಬಹುದೆಂದು ಅಪ್ಪಣೆಯುಂ ಮಾಡಲು, ಆ ಚರಮೂರ್ತಿಗಳು ಬಂದೆ

ರಡು ಮೂರುಸಾರೆ ಕಂಥೆಯಂ ಬಲಿಸಿಕೊಂಡರೂ ನಿಲ್ಲದೆ ಸಡಲಿದ ಕಾರಣ ಪುನಃ ಸ್ವಾಮಿಯವರ ಸನ್ನಿಧಿಗಾಗಮಿಸಿ, ಅಡಿಕೆಮೂಡಿಕೊಂಡು ನನ್ನ ಪ್ರಾಣವನ್ನು ಕಳೆದು ಕೊಳ್ಳುವೆನೆಂದಾಡಿದ್ದರಿಂದ ಸ್ವಾಮಿಗಳು ಮಹಾ ಕೋಪೋದ್ಭವರಾಗಿ, ಆ ಚರಮೂರ್ತಿಗಳನ್ನು ಹೊರಗೆದೂಡಿಸಿದರು. ಸಂಪಾದನ ಸಿದ್ಧವೀರ ಚರಮೂರ್ತಿಗಳು ಮೈಸೂರಿಗೆ ಹೋಗಿ, ರಾಮಾನುಜ- ವೈಷ್ಣವ- ಹತ್ತಿಬಣಜಿಗರೆಂಬ ಅನ್ಯ ಮತದವರಿಗೆ ಬೋಧೆಯನ್ನಿತ್ತು, ಅವರಂ ಕೂಡಿಕೊಂಡು ಸ್ವಾಮಿಯವರ ಕೂಡ ಶಾಸ್ತ್ರ ವಿಷಯಂಗಳಲ್ಲಿ ತರ್ಕಮಾಡಬೇಕೆಂದು ಬಂದು, ಸ್ವಾಮಿಯವರಿಗೆ ಈ ಸಂಗತಿಯಂ ಹೇಳಿ ಕಳುಹಿಸಿದರು. ಅದಕ್ಕಾ ಸ್ವಾಮಿಯವರು ಅಗತ್ಯವಾಗಿ ಬರಬಹುದೆಂದು ಸಭೆಯನ್ನು ಸೇರಿಸಿ ಹೇಳಿ ಕಳುಹಿಸಲು, ತಮ್ಮೊಡನೆ ಬಂದ ಆ ತ್ರಿಮತಸ್ಥ ಪಂಡಿತರನ್ನು ಕರಕೊಂಡು, ಸಂಪಾದನ ಸಿದ್ಧವೀರ ಚರಮೂರ್ತಿಗಳು ಸ್ವಾಮಿಗಳ ಸಭೆಗೆ ಬಂದು, ತರ್ಕವಂಮಾಡಿ ಪರಾಜಯವನ್ನು ಹೊಂದಲು, ಆ ತ್ರಿಮತಸ್ಥರಾದ ವಿದ್ವಾಂಸರೂ, ಸಂಪಾದನ ಚರಮೂರ್ತಿಗಳೂ ಸಹ ಸೋಲ್ದ ವಾರ್ತೆಯನ್ನು ಆ ಮೈಸೂರ ಸಂಸ್ಥಾನಾಧಿಪತಿಕೇಳಿ, ಆ ಮಹ ಸ್ವಾಮಿಗಳಂ ಕರಸಿಕೊಂಡು, ಶ್ವೇತ ಛತ್ರಾದಿ ಸಕಲ ಬಿರುದಾವಳಿಗಳಂ ಕೊಟ್ಟು, ಮಹೋತ್ಸವಾದಿಗಳಿಂ ಸನ್ಮಾನಿಸಿದರು. ಮಹಸ್ವಾಮಿಗಳ ಆಜ್ಞಾನುಸಾರ ನಡೆಯದ ಕೆಲವು ಜನರಿಗೆ ಬಹಿಷ್ಕಾರವಂ ಮಾಡಿದರು. ತಮ್ಮ ಸನ್ನಿಧಿಗೆ ಬಂದು ಅಪರಾಧವಂ ಕೊಟ್ಟವರಿಗೆ ಆಶೀರ್ವಾದವಂ ದಯಪಾಲಿಸಿದರು. ಬಾರದೆ, ಆಜ್ಞಾನುಸಾರ ಪ್ರವರ್ತಿಸದೆ ಹಾಗೆಯೇ ಬಹಿಷ್ಕಾರದಲ್ಲಿದ್ದ ಜನರಿಗೆ, ತೆಲಗು ಬಣಜಿಗರೆಂಬದಾಗಿಯೂ, ತಿಗುಳರೆಂಬದಾಗಿಯೂ ವಾಡಿಕೆಯಾದ ಹೆಸರುಂಟಾಯಿತು. ಈ ಜನರು ಮೈಸೂರ ಶೀಮೆಯಲ್ಲೀಗಲೂ ಉಂಟು. ಇವರು ಅನೇಕ ದೇಶ ಸಂಚಾರವಂ ಮಾಡುತ್ತಾ, ಮಹತ್ವಂಗಳನ್ನು ತೋರಿಸುತ್ತಾ, ನಗರದಸೀಮಿಗಾಗಮಿಸಿ, ಕೊನೆಯಲ್ಲಿ ಧಾರವಾಡ ಜಿಲ್ಲೆಯ ಹಾನಗಲ್ಲ ತಾಲೂಕ ತಿಳವಳ್ಳಿಯೆಂಬ ಗ್ರಾಮಕ್ಕೆ ಬಿಜಯಂಗೈಸಿ, ಶೊಂಭತ್ತು ವರ್ಷ ವಯಸ್ಸಿನವರಾಗಿ ತಿಳವಳ್ಳಿಯಲ್ಲಿ ಬೈಲಾದರು. ಇವರ ತೋರಗದ್ದುಗೆಯು ಇದೇ ಗ್ರಾಮದಲ್ಲುಂಟು. ಶ್ರೀಮಚ್ಚನ್ನಬಸವೇಶ್ವರಾದಿಯಾಗಿ ಆಳಿದ ಪಟ್ಟ ಆರಕ್ಕೆ ವರ್ಷಂಗಳು ( ೩೭೯ ) ಈ ವರ್ಷಗಳ ಮಧ್ಯದಲ್ಲಿ ಪಟ್ಟವಿಲ್ಲದೆ ಇರುವ ವರ್ಷಂಗಳು ( ೪೩ ) ಅಂತು ಈ ಏಳನೇ ಪಟ್ಟದ ಕೊನೆಗೆ ಆದ ವರ್ಷಂಗಳು ( ೪೨೨ ) ಕಲಿಶಕೆ ( ೪೪೨೩ ) ಶಾಲಿವಾಹನ ಶಕೆ [ ೧೨೪೪ ] ಕ್ಕೆ ಸರಿಯಿರುವದು.

ಶ್ರೀ ಮುರಗ್ಯಾ ಸ್ವಾಮಿನೇ ನಮಃ

# ಲನೇಪತ್ರ

ಶಾ, ವಿ, ವೃ.

ಶ್ರೀಮತ್ಛಂಕರನೂರ್ವಿಗಾಗಮಿಸಿದೋಲ್ಕೆಂಗಣ್ಣ ಕೆವಿಖ್ಯಾತಿಯಿಂ ।
ಸ್ವಾಮಿ ಶ್ರೀ ಮುರಗಾಖ್ಯ ತನ್ನ ಕರದೋಳ್ತಾಂಬೂರ ತ್ರಿಶೂಲವಂ॥
ಪ್ರೇಮಾನಂದದೊಳೊಂದು ಜೋಣ್ಗೆ ಪಿಡಿಯುತ್ತಂದಾಗ ಕೈಲಾಸದಿಂ
ದಾವೌನೀಶನುರಾಗದಿಂದೆ ವರ ಚಿಸ್ತೂಲಾದ್ರಿಗೈತಂದನೈ ॥ ೧ ॥

॥ ಕಂದ ॥ ಇರದೀ ಮುರಗೀ ಸ್ವಾಮಿಯು ।
ಸುರ ಚಿರ ವರಪಾದಪದ್ಮಯುಗ್ಮಂಗಳಿಗಾಂ ॥
ಶಿರಬಾಗಿ ನಮಿಸಿ ಬೇಡುವೆ ।
ಸಿರಿ ಸಾಂಬ್ರಾಜ್ಯಾದಿ ವಿಭವ ನಿವಹಂ ಮುದದಿಂ ॥ ೨ ॥

ಶ್ರೀ ಮಜ್ಜಗದ್ಗುರು ಮುರಿಗ್ಯಾ ರಾಜೇಂದ್ರ ಸ್ವಾಮಿಗಳೆಂಬ ಶಿವಯೋಗೀಶ್ವರರರು ಭೂಮಿಯ ಜನರನ್ನು ಉದ್ಧರಿಸುವದಕ್ಕಾಗಿಯೂ, ಶ್ರೀ ವೀರಶೈವಮತವನ್ನು ವೃದ್ಧಿಗೊಳಿಸುವದಕ್ಕಾಗಿಯೂ, ಕೈಲಾಸದಿಂದವತರಿಸಿ ಬಂದರು. ಅವರ ತೇಜಸ್ಸು ಪ್ರಕಾಶ ಮಯದಿಂದೆ ಹೊಳೆಯುವದಾಗಿಯೂ, ಶಿವಚಿನ್ಹವು ಉಕ್ಕೇರಿ ಮೇಲ್ವರಿಯುವದಾಗಿಯೂ, ಇರುವದಲ್ಲದೆ. ಶಿವಸಾಮ್ರಾಜ್ಯ ವೈಭವಾತಿಶಯರೂ, ಪರವಾದಿಗಳೆಂಬುರುತರ ತಮೌಘಕ್ಕೆ ಸೂರ್ಯಪ್ರಾಯರೂ, ಆಗಿ ಮುರಿ ಮುರಿಯಾದ ಪಂಚವರ್ಣಗಳ ಮುರಿಗಿ ಮುಂಡಾಸವನ್ನು ಸುತ್ತಿ, ಮುರಿ ಮುರಿಯಾದ ಮುರಿಗಿ ವಡಿಯನ್ನು ಹೊದ್ದುಕೊಂಡು, ಕಾವಿಕಾಷಾಂಬರ ಕಪ್ಪನಿಯಿಂದೊಪ್ಪವರಾಗಿ, ಬಲಹಸ್ತದಲ್ಲಿ ಮುರಿಮುರಿಯಾದ ಮುರಿಗಿ ಜೋಂಗೆಯಂ ಪಿಡಿದು, ಎಡಗೈಯ್ಯಲ್ಲಿ ಕಿನ್ನರಿಯನ್ನೂ ತ್ರಿಶೂಲವನ್ನೂ ಧಾರಣ ಮಾಡಿದ್ದರು. ಮುರಿಗಿಮುಂಡಾಸವನ್ನು ಸುತ್ತಿ, ಮುರಿಗಿ ಶಾಲನ್ನು ಹೊದ್ದು, ಮುರಿಗಿ ಜೋಂಗೆಯಂ ಪಿಡಿದ ಕಾರಣದಿಂದಲೇ ಮುರಿಗಿ ಸ್ವಾಮಿಗಳೆಂದು ಜನರು ಅನ್ನುವದಾಗಿ ಕಾಣುವದು; ಅವರು ಅಷ್ಟಮದಗಳೆಂಬಷ್ಟಗಜಗಳನ್ನು ಸೀಳಿ, ಅರಿಷಡ್ವರ್ಗಗಳೆಂಬಾರು ಮೃಗಗಳನ್ನು ನಾಶಮಾಡಿ, ಜಗದೇಕವೀರನಾದ ಮಾರನನ್ನು ಸುಟ್ಟು, ಅನ್ನಪಾನಾದಿ ಆಹಾರಂಗಳಂ ವಿಸರ್ಜಿಸಿ, ಅಪ್ರಾಪರಣ ಷಡಕ್ಷರ ಮಂತ್ರಮಹಿಮರಾಗಿ ಮೆರೆವ ಆ ಶಿವಯೋಗಿಗಳ ದರ್ಶ

ಸಮಾತ್ರದಿಂದಲೇ ಪಾಪವು ವಿನಾಶವನ್ನೈದುತ್ತಿತ್ತು; ಮಹಿಮಾತಿಶಯವುಳ್ಳ ಆ ಮಹಿಮಾ ಮೂರ್ತಿಯು ದೇಶದೇಶಂಗಳನ್ನು ಸಂಚರಿಸುತ್ತಾ, ಸಂಚರಿಸಿದ ಭೂಮಿಯನ್ನು ಪವಿತ್ರಂಗೈಯುತ್ತಾ ಚಿನ್ಮೂಲಾದ್ರಿಯೆಂಬ ಸ್ಥಳಕ್ಕೈತಂದರು. ಒಂದಾನೊಂದು ದಿನ ಅವರು ಕಾಡಿನಲ್ಲಿ ಸಂಚರಿಸುವಾಗ್ಗೆ, ಮಧ್ಯಾಹ್ನದ ಮೇಲೆ ಭರಮನೆಂಬ ಒಬ್ಬ ಬೇಡರ ಹುಡುಗನು ದನಗಳನ್ನು ಮೇಯಬಿಟ್ಟು, ಒಂದು ವೃಕ್ಷದ ನೆರಳಿನಲ್ಲಿ ಮಲಗಿ ನಿದ್ರೆ ಮಾಡುತ್ತಿರ್ದನು. ಒಂದು ನೀಳವಾದ ಕಾಳಿಂಗ ಸರ್ಪವು, ಆ ಹುಡುಗನ ಮುಖಕ್ಕೆ ಬಿಸಲು ತಾಗದಂತೆ ಹೆಡೆಯನ್ನೆತ್ತಿಕೊಂಡು, ನೆರಳನ್ನುಂಟು ಮಾಡಿರುವದನ್ನು ಮಹಸ್ವಾಮಿಗಳು ನೋಡಿ, ಆ ಹುಡುಗನೆಡೆಗೆ ಬರುವಷ್ಟರಲ್ಲಿ ಆ ಸರ್ಪವು ಸ್ವಾಮಿಗಳಂ ನೋಡಿ, ಅಲ್ಲಿಯೇ ಇರುವ ತನ್ನ ಹುತ್ತದೊಳಪೊಕ್ಕಿತು. ಬಳಿಕವರು ಆ ಮರದಡಿಗೆ ಬಂದು, ತಮ್ಮ ಹಸ್ತದಲ್ಲಿರುವ ಮುರಿದೊಂಣೆಯನ್ನು ಆ ಹುಡುಗನ ಮಸ್ತಕದ ಮೇಲೆ ಮೆಲ್ಲನೆ ಇಡಲಾಗಿ, ನಿದ್ರೆತಿಳಿದೆದ್ದು ತನ್ನೆದುರಿನಲ್ಲಿ ನಿಂತಿರುವ ಶ್ರೀಸ್ವಾಮಿಗಳನ್ನು ನೋಡಿ, ಭಯಾನ್ವಿತನಾಗಿ ಸಾಷ್ಟಾಂಗ ನಮಸ್ಕಾರವನ್ನು ಮಾಡಿದನು. ಹಾಗೆ ನಮಸ್ಕರಿಸುವ ಆ ಹುಡುಗನನ್ನು ಕುರಿತು,— ಎಲೈ ಬಾಲಕನೇ ಮಹದೈಶ್ವರ್ಯಯುಕ್ತನಾಗಿ ಈ ಸೀಮೆಗೆ ನೀನೇ ಅರಸನಾಗುವಿಯೆಂದು' ಆಶೀರ್ವದಿಸಲಾಹುಡುಗನದಕ್ಕೆ ಹಾಗಾಗುವ ಪಕ್ಷದಲ್ಲಿ ಗುರುಗಳಾದ ತಂಮದೇ ಕೂತ ಪಟ್ಟವು; ತಮಗೆ ಶಿಷ್ಯನಾದ ನನ್ನದೇ ನಿಂತ ಪಟ್ಟವೆಂದಾಡಿ, ಪುನಃ ಸಮಸ್ಕರಿಸಿ, ಸ್ವಾಮಿಗಳ ಸೇವಾತತ್ಪರನಾಗಿ ಅವರ ಸಂನಿಧಿಯುಲ್ಲಿಯೇ ಇರುತ್ತಿದ್ದನು. ಹೀಗಿರುತ್ತಾ ಕೆಲವು ದಿವಸಗಳಾದನಂತರ, ಚಿತ್ರಕಲ್ದುರ್ಗದ ರಾಜನಾದ ಚಂದ್ರಮಾಳಿಯೆಂಬರಸು ಗುಣವಂತನಾಗಿಯೂ, ಸದಾಚಾರ ಪ್ರವರ್ತಕನಾಗಿಯೂ, ಶಿವಧ್ಯಾನಯುತನಾಗಿಯೂ ವಯೋವೃದ್ಧನಾಗಿ ಸಂತಾನವಿಲ್ಲದೆ ರಾಜ್ಯವನ್ನು ಪರಿಪಾಲಿಸುತ್ತಿರ್ದನು. ಒಂದಾನೊಂದು ದಿನ ಮನದಲ್ಲಿ ಆಲೋಚಿಸಿ, ಶಿವಭಕ್ತಿಯಿಲ್ಲದವನ ಜನ್ಮವೂ, ಕಳೆಯಿಲ್ಲದ ಪೆಣ್ಣೂ, ವೇಗವಿಲ್ಲದಶ್ವವೂ, ಕವಿತ್ವವಿಲ್ಲದವನ ಜಾಣ್ಮೆಯೂ, ಗಿಳಿಮರಿಯಾಡದ ವನವೂ, ಅಳಿಮರಿಯಾಡದ ಕಮಲಂಗಳೂ, ಎಳೆಬಾಲಕನಾಡದ ಅಂಗಣವೂ, ವ್ಯರ್ಥವಾದದ್ದೆಂದುಸುರ್ಗರೆಯುತ್ತಾ ಮನದೊಳಗಾಲೋಚಿಸಿ, ಈ ಪರ್ವತದಲ್ಲೋರ್ವ ತೇಜಃಪುಂಜರಾದ ಶಿವಯೋಗೀಶ್ವರರು ಸಂಚರಿಸುತ್ತಿರುವರೆಂದು ಕೇಳಿರುತ್ತೇನೆ. ಆ ಮಹಾತ್ಮರ ದರ್ಶನ ತೆಗೆದುಕೊಂಡು ಮುಂಪಾಲೋಚಿಸಿದರಾಯಿತೆಂದು, ಮನದೊಳಗೆ ಭಾವಿಸಿ, ಸ್ವಾಮಿಯವರ ದರ್ಶನ ತೆಗೆದುಕೊಂಡು, ಸಾಷ್ಟಾಂಗ ನಮಸ್ಕಾರವಂ ಮಾಡಿ, ಕೈಜೋಡಿಸಿಕೊಂಡು ಭೋಸ್ವಾಮಿನ್, ಸ

ನಗೆ ವೃದ್ಧಾಪ್ಯವಾಗಿ, ಆಯುಷ್ಯವು ಪೂರೈಸುವ ಕಾಲವು ಸಮೀಪವಾಗಿರ್ಪುದು. ಸ
ನಗೆ ಸಂತಾನವಿಲ್ಲದಿರುವದರಿಂದ ನನ್ನೀರಾಜತ್ವವೂ,ಐಶ್ವರ್ಯವೂ ನಾನು ಗತಿಸಿದ
ಮೇಲೆ ಕಂಡವರ ಪಾಲಾಗುವದಕ್ಕಿಂತ ತಮ್ಮಂಥ ಶಿವಯೋಗೀಶ್ವರರ ಪಾದಾರ
ವಿಂದಂಗಳಿಗೆ ಸಮರ್ಪಿಸಿ, ತಮ್ಮ ಪಾದಸೇವಾತತ್ಪರನಾಗಿರ್ಪೆನು; ಆದ್ದರಿಂದ ತಾ
ವು ನಾನು ಕೊಡುವ ನನ್ನ ರಾಜ್ಯವನ್ನೂ, ಸಂಸ್ಥೈಶ್ವರ್ಯವನ್ನೂ ಕೂಡಾ ಸ್ವೀಕ
ರಿಸಿ, ನಾನು ಧನ್ಯನಾಗುವಂತೆ ಕೃಪೆಯಂ ಮಾಡಬೇಕೆಂದು ಪ್ರಾರ್ಥಿಸಲು, ಶ್ರೀಸ್ವಾ
ಮಿಗಳು “ ಕಲ್ಯಾಣಮಸ್ತು ,, ಎಂದಾಶೀರ್ವದಿಸಿ, ಎಲೈ ಭಕ್ತನೇ ವಿಷ್ಣು ಬ್ರಹ್ಮೇಂ
ದ್ರಾದಿ ಪದಸ್ತಂಗಳನ್ನು ಸಹ ತೃಣೀಕರಿಸಿ, ಲೆಕ್ಕಿಸದ ನಾವು ನಿನ್ನ ಸಾಮ್ರಾಜ್ಯೈ
ಶ್ವರ್ಯವನ್ನು ತೆಗೆದುಕೊಂಡು, ಏನು ಮಾಡೋಣ! ಎಂದಿಗೂ ನಾಶವಾಗದ ಶಿವ
ಸಾಮ್ರಾಜ್ಯವೆಂಬ ಸ್ಥಿರವಾದ ವೈಭವವಿರಲಿಕ್ಕೆ ನಮಗಿನ್ನಾವ ವೈಭವವೂ ಬೇಡವೆಂ
ದು, ಆ ಚಂದ್ರಮೌಳಿಯೆಂಬ ರಾಜನ ಭಕ್ತಿಗೆ ಸಂತುಷ್ಟರಾಗಿ, ಮೆಚ್ಚಿ, ನಿನ್ನ ಸಾ
ಮ್ರಾಜ್ಯೈಶ್ವರ್ಯ ವೃದ್ಧಿಯಾಗುವಂತೆ ಒಬ್ಬ ಪುತ್ರನನ್ನು ನಿನಗೆ ಕೊಡುತ್ತೇವೆಂದು
ಹೇಳಿ, ತಮ್ಮ ಸೇವಾಸಕ್ತನಾದ ಬೇಡರ ಭರಮನೆಂಬ ಹುಡುಗನನ್ನು ಕರೆದು, ಚಿ
ತ್ರಗತ್ತಿ ಭರಮಣ್ಣನಾಯಕನೆಂಬ ಅಭಿದಾನವನ್ನಿತ್ತು, ಆ ಚಂದ್ರಮೌಳಿ ರಾಜಂಗೆ
ಆ ಹುಡುಗನನ್ನು ಕೊಟ್ಟು, ನಿನ್ನರಮನೆಗೆ ಕರೆದುಕೊಂಡು ಹೋಗೆಂದಪ್ಪಣೆಯಂ
ನೀಯಲಾರಾಜನು ಸಂತೋಷ ಚಿತ್ತನಾಗಿ, ಬಡವನಿಗೆ ಭಾಗ್ಯವೂ, ಮಹಲಕ್ಷ್ಮಿ
ಧಾತುರರಿಂಗೆ ಹಾಲ್ಗಡಲೂ ದೊರೆದಂತೆ, ತಮ್ಮಾಶೀರ್ವಾದದ ಒಲದಿಂದೆ ನನಗೆ
ಸಂತಾನವು ದೊರಕಿತೆಂದು ಪುನಃ ನಮಸ್ಕರಿಸಿ, ಸ್ವಾಮಿಯವರನಿರೂಪಾನುಸಾರ
ಆ ಹುಡುಗನೊಡನೆ ತನ್ನರಮನೆಗೆ ತೆರಳಿ, ಆ ಮಗುವಿಗೆ ಪಟ್ಟವಂಗಟ್ಟಿ ಸುಖದಿಂ
ದಿರುತ್ತಿದ್ದನು. ಆ ಸ್ವಾಮಿಯವರು ಮೈಸೂರಿಗೆ ಬಿಜಯಂಗೈಸಿ, ರಾಜಸ್ಥಾನದಲ್ಲಿರು
ವ ಪರವಾದಿ ತ್ರಿಮತಸ್ಥ ಪಂಡಿತರನ್ನು ವಾದದಲ್ಲಿ ಜೈಸಿ, ಲಿಂಗಸೂತ್ರದ ನಿರ್ಣಯವ
ನ್ನು ಮಾಡಿಕೊಟ್ಟು, ಮೈಸೂರ ಮಹಾರಾಜರಿಂದ ಮನ್ನಣೆಗೊಂಡು,ಉತ್ಸಹದಿ ಸಂ
ಭ್ರಮದಿಂದೆ ದೇಶಂಗಳಂ ಸಂಚರಿಸುತ್ತಾ ಢಿಳ್ಳಿ ಪಟ್ಟಣಕ್ಕಾಗಮಿಸಿ, ಆ ಪಟ್ಟಣದಲ್ಲಿ
ರುವ ಮುದಿಮಲ್ಲಪ್ಪನೆಂಬ ಶಿವಭಕ್ತನ ಗೃಹದಲ್ಲಿ, ಶಿವಯೋಗಾನಂದದಿಂದಿರ್ದರು.
ಒಂದು ದಿನ “ಢಿಳ್ಳಿಯ ಬಾದಶಹನ ಪಟ್ಟದಾನೆ ಮೃತಪಟ್ಟಿತೆಂಬದಾಗಿ” ವಾರ್ತೆಯ
ನ್ನು ಕೇಳಿ,ಆ ಸತ್ತ ಆನೆಯು ಬಳಿಗೈತಂದು ತಮ್ಮ ದಿವ್ಯದೃಷ್ಟಿಯಿಂದೀಕ್ಷಿಸಿ, ಬೆತ್ತದಿಂದ
ಹೊಡದ ಕೂಡಲೇ, ಮೃತವಾದ ಗಜವು ಎದ್ದು ನಿಂತಿತು. ಒಬ್ಬ ಶಿವಯೋಗೀ
ಶ್ವರರು ಸತ್ತ ನಿಮ್ಮ ಪಟ್ಟದಾನೆಯನ್ನೆಬ್ಬಿಸಿದರೆಂದು ಬಾದಶಹನಿಗೆ ಹೇಳಲಾಗಿ ಸಂ

ತೋಷಚಿತ್ತನಾಗಿ, ಅಂಥಾ ಮಹಿಮಾ ಪುರುಷರಾರೋ! ಅವರ ದರ್ಶನಾಶೀರ್ವಾ
ದವಂಪಡೆಯುವದು ಪೂರ್ವದ ಪುಣ್ಯಾಂಶವೆಂದು ಭಾವಿಸಿ, ಆ ಕ್ಷಣವೇ ತನ್ನ ರಾ
ಜವೈಭವದೊಡನೆ ಪಾದಚಾರಿಯಾಗಿ ಶ್ರೀಸ್ವಾಮಿಗಳಿದ್ದ ಸ್ಥಳಕ್ಕೆ ಬಂದು ಸಾಷ್ಟಾಂ
ಗ ಪ್ರಣೀತನಾಗಿ; ಜಯಘೋಷವನ್ನು ಮಾಡುತ್ತಾ ಕೈಜೋಡಿಸಿಕೊಂಡು ನನ್ನ
ಮನೆಗೆ ಬಿಜಯಂಗೈಸಬೆ ಕೆಂದು, ದೀನೋಕ್ತಿಯಿಂದ ಬೇಡಿಕೊಳ್ಳಲದಕ್ಕೆ ಸ್ವಾಮಿ
ಗಳು ಒಪ್ಪಿಕೊಂಡದ್ದರಿಂದ, ಬಾದಶಹನು, ಮೃತವಾಗಿ ಮರಳಿ ಜೀವಿಸಿದ ಆ ಆನೆ
ಯನ್ನ ಶೃಂಗರಿಸಿ, ಭಂಗಾರದ ಅಂಬಾರಿಯಲ್ಲಿ ಸ್ವಾಮಿಗಳನ್ನು ಕೂಡ್ರಿಸಿ, ಶ್ವೇತಛ
ತ್ರಾದಿ ಎಪ್ಪತ್ತೆರಡು ಬಿರುದಾವಳಿಗಳಿಂದ ಉತ್ಸಾಹವನ್ನು ಮಾಡುತ್ತಾ ಅರಮನೆಗೆ
ಕರೆದುಕೊಂಡು ಹೋಗಿ, ರತ್ನಖಚಿತವಾದ ಸಿಂಹಾಸನದ ಮೇಲೆ ಸ್ವಾಮಿಯವ
ನ್ನ ಮೂರ್ತಗೊಳಿಸಿ,ಕೈಜೋಡಿಸಿಕೊಂಡು ನನಗೇನಪ್ಪಣೆಯಾಗುವದೋ ಅದನ್ನು
ಈ ದೀನ ಸೇವಕನಾದ ನಾನು ಮಾಡಲು ಸಿದ್ಧನೇ ಇರುವೆನೆಂದು ಅರಿಕೆಮಾಡಿಕೊ
ಳ್ಳಲದಕ್ಕೆ, ಬಾದಶಹನ ನುಡಿಗಳಂ ಕೇಳ್ದು, ನಮ್ಮ ಚನ್ನಬಸವರಾಜೇಂದ್ರರು ಕಲಿ
ಶಕೆ ( ೪೦೦೧ ) ಶಾಲಿವಾಹನ ಶಕೆ ( ೮೨೨ ) ನೇ ಸಾಲಿನಲ್ಲಿ ನಿಮ್ಮ ವಜೀರನಾದ
ಮಲ್ಲೂಖಾನ ಎಂಬುವನ ವಶಕ್ಕೆ ಶಿಖಾ ಒಂದು, ಶೈಲಒಂದು, ಸುವರ್ಣದ ಸಿಂಹಾಸ
ನ ಒಂದು ಈ ಪ್ರಕಾರವಾಗಿ ಮೂರು ಪದಾರ್ಥಂಗಳನ್ನು ಕೊಟ್ಟು, ದಾಖಲೆಯ
ನ್ನು ಬರೆಸಿರುತ್ತಾರೆ. ಆ ಪದಾರ್ಥಗಳು ನಮ್ಮವು; ನಮ್ಮಗೇ ಸೇರತಕ್ಕವು. ಆದ್ದರಿಂದ
ವುಗಳನ್ನ ಲೇಖನದ ದಾಖಲೆಯಿಂದ ಪರಿಶೋಧಿಸಿ, ಕೊಡುವುದೆಂದಪ್ಪಣೆಯನ್ನಿ
ಯಲಾ ಬಾದಶಹನು ಪೂರ್ವದ ರಿಕಾರ್ಡಗಳಲ್ಲಿ ಸದರಿ ಶಕೆಯ ದಾಖಲೆಯನ್ನು ತೆ
ಸಿ ನೋಡಲು, "ಮಲ್ಲೂಖಾನನ ವಶಕ್ಕೆ ಆ ಮೂರೂ ಪದಾರ್ಥಗಳು ೪೦೦೧ನೇ
ಕಲಿ ಶಕೆಯಲ್ಲಿ ಬಂದಿರುವದಾಗಿಯೂ, ಮುಂದೆ ಮಹಿಮಾ ಪುರುಷರಾಗಿ ಮಹತ್ವ
ನ್ನ ತೋರಿಸಿ,ಈಪದಾರ್ಥಗಳು ನಮ್ಮವು ಎಂದಾರು ಕೇಳುವರೋ ಅವರ ವಶಕ
ಕೊಡತಕ್ಕದ್ದೆಂದೂ"ಬರೆದಿರುವ ದಾಖಲೆಯನ್ನ ನೋಡಿ, ಪರಮಾಶ್ಚರ್ಯಯುತನಾ
ಗಿ, ದಾಖಲೆಯಲ್ಲಿ ಬರೆದಿಟ್ಟ ಸ್ಥಳದಿಂದವುಗಳಂ ತೆಗಿಸಿ ಸ್ವಾಮಿಯವರಿಗೊಪ್ಪಿಸಿ,
ವ್ವ ಸ್ವಂತದ ಲಾಲಶಿಖಾ ಒಂದು, ಹಸರು ಕಿನ್ಕಾಪಿನ ಜುಬ್ಬೆಯೊಂದು, ಹಸರುಗು
ಚ್ಛ ಒಂದು ಸಹ ಸ್ವಾಮಿಗಳಿಗೆ ಕೊಟ್ಟು, ಶ್ರೀಜಗದ್ಗುರು ಮುರಿಗ್ಯಾರಾಜೇಂದ್ರ
(ಕಲೇಂದ್ರರ ಬಾದಶಹ ಅಲ್ಲಾಖುದಾ)ನೀನೇ ಎಂದುಅನಂತರೀತಿಯಿಂದ ಕೊಂಡ
ಡಿ, ಅಡಿಗಡಿಗೆ ವಂದಿಸಿ,( ೨೨ ) ಬಿರುದಾವಳಿಗಳಂ ಕೊಟ್ಟು, ಕಾಣಿಕೆಯನ್ನ
ಲ್ಲಿಸಿ, ದಾನಶಾಸನಗಳನ್ನು ಬರೆಸಿ, ಹನ್ನೆರಡು ಸಾವಿರ ದಂಡನ್ನವರೊಡನೆ

ಸುಹಿಸಿ ಕೊಡಲು, ಮಹಾಸ್ವಾಮಿಯವರು ಡಿಳ್ಳಿಯಿಂದ ಹೈದರಾಬಾದಕ್ಕೆ ಬಿಜಯಂಗೈಸಲು, ಅಲ್ಲಿಯ ಬಾದಶಹನು, ಈ ವಾರ್ತೆಯಂ ಕೇಳಿ, ತನ್ನ ಚತುರಂಗಸೇನೆ ಸಹ ಮಹಾಸಂಭ್ರಮದಿಂಪೆದುರ್ಗೊಂಡು ಬಂದು, ಸ್ವಾಮಿಗಳಿಗೆ ನಮಸ್ಕರಿಸಿ, ಎನ್ನರಮನೆಗೆ ಬಿಜಯಂಗೈಸಬೇಕೆಂದು ಬೇಡಿಕೊಳ್ಳಲದಕ್ಕೊಪ್ಪಿ, ಅಡ್ಡಪಲ್ಲಕ್ಕಿ-ಶ್ವೇತಛತ್ರಾದಿ ೩೨ ಬಿರುದಾವಳಿ ಸಹಿತ ಉತ್ಸಾಹದೊಡನೆ ಬಾದಶಹನರಮನೆಗಾಗಮಿಸಲಾಗಿ, ಬಾದಶಹನು ಸಿಂಹಾಸನದ ಮೇಲೆ ಕೂಡ್ರಿಸಿ ನಮಸ್ಕರಿಸಿ, ಎನ್ನ ಪಟ್ಟದಾನಿಗೆ ಬಹಳ ಕಾಯಿಲೆಯಾಗಿ ಯಾವ ವೈದ್ಯರಿಂದಲೂ ಗುಣವಾಗದಿರುವದೆಂದು ವಿಜ್ಞಾಪನೆಯಂ ಮಾಡಿ ಆನೆಯಂ ತೋರಿಸಲು, ಸ್ವಾಮಿಗಳು ತಮ್ಮ ದಿವ್ಯದೃಷ್ಟಿಯಿಂದೀಕ್ಷಿಸಿ, ಉದಕವನ್ನದರ ಮೇಲೆ ಸಂಪ್ರೋಕ್ಷಿಸಿದಾಕ್ಷಣವೇ ಆನೆಯ ರೋಗವು ಪರಿಹಾರವಾಗಲಾಗಿ, ಬಾದಶಹ ಸಂತೋಷ ಮಾನಸನಾಗಿ, ತನ್ನ ರಾಜಧಾನಿಯಾದ ಹೈದರಾಬಾದಿನ ರಾಜಬೀದಿಯಾದ ಪೇಟೆಯೊಳೊಂದು ಬದ್ಧಕಟ್ಟಿನ ವಿರಕ್ತಮಠವಂ ಕಟ್ಟಿಸಿ, ಆ ಮಠದ ವಿನಿಯೋಗಕ್ಕೋಸ್ಕರ ಅನೇಕ ಭೂದಾನಂಗಳನ್ನಿತ್ತು, ಶಾಸನ ಸನದುಗಳಂ ಕೊಟ್ಟು. ವ್ಯಾಪಾರಿಕರ ಧರ್ಮಾದಾಯದ ಹಣವು ಆ ಮಠಕ್ಕೆ ಸಲ್ಲಿಸುವಂತೆ ಹುಕುಂ ಮಾಡಿ, ರಾಜಮರ್ಯಾದೆಗಾಗಿ ಎರಡು ಶ್ವೇತ ಛತ್ರಂಗಳನ್ನಿತ್ತು, ಅವರಾಶೀರ್ವಾದವಂ ಪಡೆದುಕೊಂಡು; ಬಿರುದಾವಳಿ ಸಹ ಮಹೋತ್ಸಹನೊಡನೆ ಸ್ವಾಮಿಗಳನ್ನು ಕಳುಹಿಸಲು, ಸ್ವಾಮಿಗಳು ದುರ್ಗದ ಚಿನ್ಮೂಲಾದ್ರಿಗೆ ಬರಬೇಕೆಂದು ಹೊರಡುವದಾಯ್ತು; ಅತ್ತಲಾ ಚಿತ್ರದುರ್ಗದ ಬಿಚ್ಚುಗತ್ತಿ ಭರಮಣ್ಣನಾಯಕನೆಂಬರಸು ನಮ್ಮ ಸ್ವಾಮಿಗಳು ಯಾವ ಕಡೆಗೆ ಬಿಜಯಂಗೈಸಿದರೋ? ಎಂದಾಗಮಿಸುವರೋ! ಎಂದು ಹಗಲಿರಳು ಸಹ ಗುರುಧ್ಯಾನಯುಕ್ತನಾಗಿ, ಸಮಾಧಾನವಿಲ್ಲದೆ, ಚಿಂತೆಯಿಂದೊಡಗೂಡಿದ್ದನು. ಅಷ್ಟರಲ್ಲಿ ಸ್ವಾಮಿಗಳಾಗಮಿಸಿದ ವಾರ್ತೆಯನ್ನು ಕೇಳಿ, ಸಕಲಬಿರುದಾವಳಿಯಿಂದ ಉತ್ಸಹದಿಂದೆದುರ್ಗೊಂಡು ತನ್ನರಮನೆಗೆ ಕರತಂದು ಪೂಜಿಮಾಡಿ, ತನ್ನರಮನೆಗೆ ಸಮೀಪದಲ್ಲಿ ಗಿರಿಯಮೇಲೊಂದು ಸಂಪಿಗಿ ಸಿದ್ಧೇಶ್ವರ ದೇವಸ್ಥಾನದ ಸಮೀಪದಲ್ಲಿ (೩೬೦) ಅಂಕಣಗಳುಳ್ಳದೊಂದು ಶಿಲಾಮಯವಾದ ಮಠವನ್ನು ಕಟ್ಟಿಸಿಕೊಟ್ಟು, ನನ್ನ ವಾಗ್ದಾನದಂತೆ ನಾನು ನಿಮ್ಮಾಜ್ಞಾನುಸಾರ ನಿಂತಪಟ್ಟದಿಂದೆ ರಾಜ್ಯವನ್ನಾಳುವದಕ್ಕಪ್ಪಣೆಯಾಗಬೇಕೆಂದು ಪ್ರಾರ್ಥಿಸಲದಕ್ಕೆ ಮೆಚ್ಚಿ, ಮಠದಲ್ಲಿ ಲಿಂಗಪೂಜಾ ಜಂಗಮ ದಾಸೋಹಂಗಳನ್ನು ಮಾಡುತ್ತಾ ಶಿವಸಾಂಮ್ರಾಜ್ಯ ವೈಭವಯುತರಾಗಿದ್ದರು. ತಮ್ಮ ಖಾಸಾದ ಚರಮೂರ್ತಿಗಳಲ್ಲಿ ಚೀಲಾಳಪ್ಪನವರನ್ನು ಕಾಣಿಕೆಯ ಮಹಾ

ಲಿಗಾಗಿ ಚರಪನಹಳ್ಳಿ ಸೀಮೆಗೂ, ಮತ್ತೊರ್ವ ಚರಮೂರ್ತಿ ಕುಮಾರಪ್ಪನವರನ್ನು ಸ್ವಾದಿಯ ಸೀಮೆಗೂ ಕಳಿಸಿದ್ದರು. ರಣಾಂಗಣದಲ್ಲಿ ಮರಣವಾಗುವಂತೆ ಬೇಡಿಕೊಂಡ ಬಿಜ್ಜಗತ್ತಿ ಭರಮಣ್ಣನಾಯಕನಿಗೆ ವರವನ್ನಿತ್ತು, ಈ ಗಿರಿಯ ಸಮೀಪದಲ್ಲೊಂದು ಮಠವನ್ನು ಕಟ್ಟಿಸಿ, ಅದರಲ್ಲೊಂದು ಯೋಗ ಸಮಾಧಿಯನ್ನು ತಯಾರ ಮಾಡಿಸುವದಾಗಿ ಅಜ್ಞೆಯನ್ನೀಯಲು, ಅದರಂತೆ ಸಿದ್ಧಮಾಡಿಸಿ ಮುಂದೆ ನಮಗೂ ನಮ್ಮ ವಂಶಜರಿಗೂ ಗುರುವನ್ನು ನೇಮಿಸಿ ಕೊಡಬೇಕೆಂದು ಬೇಡಿಕೊಳ್ಳಲದಕ್ಕೆ ತಮ್ಮ ಸೇವೆಯಲ್ಲಿರುವ ಗುರುಸಿದ್ಧಸ್ವಾಮಿಗಳಿಗೆ ಇಮ್ಮಡಿ ಮುರಿಗೀಸ್ವಾಮಿಯೆಂದು ಹೆಸರನ್ನಿಟ್ಟು, ಆ ಕ್ಷಣವೇ ತಮ್ಮಲ್ಲಿರುವ ಭಂಗಾರದ ಸಿಂಹಾಸನದ ಮೇಲೆ ಅವರನ್ನು ಕೂಡ್ರಿಸಿ, ಶಿಖಾ ಶೈಲಗಳನ್ನು ಅವರಿಗೊಪ್ಪಿಸಿ ಇವರೇ ಜಗದ್ಗುರುಗಳೆಂದು ಹೇಳಿ, ಭರಮಣ್ಣನಾಯಕಾದಿ ಸಕಲರು ನೋಡುವಂತೆ ತಯಾರಾಗಿರುವ ಚಿನ್ಮೂಲಾದ್ರಿ ಬೃಹನ್ಮಠದಲ್ಲಿ ಸಕಾಯ ಸಮಾಧಿಯೊಳಪೊಕ್ಕು, ಶಿವಯೋಗಾನಂದಯುತರಾಗಿ ಮಂಡಿಸಿದರು. ಈ ಬೃಹನ್ಮಠದ ( ೩೬೦ ) ಅಂಕಣಗಳು ಶಿಲಾಮಯದಿಂದ ವಿಸ್ತಾರವಾಗಿಯೂ, ರಾಜಸ್ಥಾನದಂತೆ ಕಂಗೊಳಿಸುವದಾಗಿಯೂ ಇರುವದು.

---

ಶ್ರೀ ಇಮ್ಮಡಿ ಗುರುಸಿದ್ಧಸ್ವಾಮಿನೇನಮಃ

# ೯ನೇ ಪಟ್ಟ

ಮ. ಮಾ. ವೃ.

ಧಾರುಣೀತಳ ಚಿನ್ಮೂಲಾದ್ರಿಯ ದೇವಸರ್ವಜನಂಗಳಂ ।
ಭೂರಿತೋಷದಿ ರಕ್ಷಿಸುತ್ತಲೆ ಕಾಯಜಾರಿಯ ಸಂತತಂ ॥
ಶೋಭಿಸುವಂ ಗುರುಸಿದ್ಧನಿಮ್ಮಡಿ ಚಿನ್ಮಯ ಪ್ರಭು ರೂಪದಿಂ ।
ಪಾರುವರ್ಗವ ಮೀರಿ ಶ್ರೀಗುರುವಾಗಳೊಪ್ಪಿದ ನಂದದಿಂ ॥೧॥

ಶ್ರೀ ಇಮ್ಮಡಿ ಗುರುಸಿದ್ಧಸ್ವಾಮಿಗಳಿಗೆ ಶ್ರೀ ಮಚ್ಚಿನ್ಮೂಲಾದ್ರಿ ಬೃಹನ್ಮಠದ ಶೂನ್ಯಸಿಂಹಾಸನಾಧೀಶತ್ವವು ಬಂದ ಮೇಲೆ, ಬೃಹನ್ಮಠದಲ್ಲಿವರು ಗಣಸಮೂಹದೊಡನೆ ಲಿಂಗಪೂಜಾ ಜಂಗಮ ದಾಸೋಹಾದಿ ಮಹತ್ಕಾರ್ಯಂಗಳಂ ಪ್ರತಿದಿನದಲ್ಲಿಯೂ ನೆರವೇರಿಸುತ್ತ, ಭಕ್ತ ಜನರನ್ನು ದರ್ಶನಾಶೀರ್ವಾದದಿಂದ ಪವಿತ್ರರನ್ನು ಮಾಡುತ್ತಾ ಶಿವಯೋಗಾನಂದದಿಂದಿರುತ್ತಿದ್ದರು.

ಮೂಲಮುರಿಗ್ಯಾ ಕರ್ತೃಗಳಿಂದ ಹರಪನಹಳ್ಳಿ-ಸ್ವಾದಿ-ಸೀಮೆಗಳಿಗೆ ಕಳಿಸಲ್ಪಟ್ಟ ಚೀಲಾಳ ಸ್ವಾಮಿಗಳೂ, ಕುಮಾರಸ್ವಾಮಿಗಳೂ, "ಮುರಿಗ ಕರ್ತರು ಶಿವಯೋಗ ಸಮಾಧಿಯಂ ಪೊಕ್ಕರೆಂತಲೂ, ಸಮಾಧಿಯಂ ಪೊಗುವ ಕಾಲದಲ್ಲಿ ಇಮ್ಮಡಿಗುರು ಸಿದ್ಧಸ್ವಾಮಿಗಳಿಗೆ ಪಟ್ಟವಂಗಟ್ಟಿದರೆಂತಲೂ" ವಾರ್ತೆಯನ್ನು ಕೇಳಿ, ಕುಮಾರಸ್ವಾಮಿಗಳು ಸ್ವಾದಿಯ ಸದಾಶಿವ ರಾಜನಿಗೆ, ಇಮ್ಮಡಿಗುರುಸಿದ್ಧಸ್ವಾಮಿಗಳ ವಿಷಯದಲ್ಲಿ ದ್ವೇಷಭಾವವು ಉಂಟಾಗುವಂತೆ ಬೋಧನಂ ಪೇಳಿ, ಸ್ವಾದಿಯ ಸದಾಶಿವರಾಜನ ಭಕ್ತಿಯಲ್ಲಿ ವಾಸಿಸುತ್ತಿದ್ದರು. ಚೀಲಾಳ ಸ್ವಾಮಿಗಳು ನಮ್ಮಂಥ ಘನತರವಾದ ಚರಮೂರ್ತಿಗಳಿದಲ್ಲಿ, ಆ ಇಮ್ಮಡಿ ಗುರುಸಿದ್ಧಸ್ವಾಮಿಗಳಿಗೆ, ಪಟ್ಟವನ್ನು ಹೇಗೆ ಕಟ್ಟಿದರೆಂದು, ಕೋಪದಿಂದ ಚಿತ್ರದುರ್ಗದ ಚಿನ್ಮೂಲಾದ್ರಿ ಬೃಹನ್ಮಠಕ್ಕೈತಂದು, ನಾವೇ ಈ ಪಟ್ಟಕ್ಕೆ ಸಲ್ಲುವ ಯೋಗ್ಯರು; ನೀವು ಈ ಪಟ್ಟಕ್ಕೆ ಯೋಗ್ಯರಲ್ಲವೆಂದು ಸ್ವಾಮಿಗಳನ್ನು ದೂಷಿಸಲು, ಇಮ್ಮಡಿ ಗುರುಸಿದ್ಧಸ್ವಾಮಿಗಳು ತಮ್ಮ ಶಿಷ್ಯನಾದ ದುರ್ಗದ ರಾಜನಿಗೆ ತಿಳಿಸಲು ಆ ಚೀಲಾಳ ಚರಮೂರ್ತಿಗಳನ್ನು ತಮ್ಮ ದೇಶದ ಗಡಿದಾಟಿಸಲಾಚೀಲಾಳ ಸ್ವಾಮಿಗಳು ಹರಪನಹಳ್ಳಿ ದೊರೆಯ ಬಳಿಗೈತಂದು, ಬೋಧನಂ ಮಾಡಿ, ತಮ್ಮಾಜ್ಞಾನುಸಾರ ಪ್ರವರ್ತಿಸುವಂತೆ ನಮಸ್ಕಾರವನ್ನು ಮಾಡಿಸಿಕೊಂಡು, ತಮ್ಮ ಹೆಸರಿನ ಚೀಲಾಳ ಸಮಯವನ್ನು ಸಂಸ್ಥಾಪಿಸಿಕೊಂಡು, ಸುಖದಿಂದಿರ್ದರು. ಕುಮಾರಸ್ವಾಮಿಗಳು ಚಿನ್ಮೂಲಾದ್ರಿಯ ಸನ್ನಿಧಿಗೆ ಬಾರದೆ ಸ್ವಾದಿಯ ಸದಾಶಿವರಾಜನ ಬಲದಿಂದೆ, ತಮಗೆ ಕ್ರೂರವಾದ ವಾಕ್ಯಗಳಿಂದೆ ನಿಂದಿಸುತ್ತಿರುವರೆಂದು ವಾರ್ತೆಯನ್ನು ಕೇಳಿ, ( ಮುರಿಗ್ಯಾರಾಜೇಂದ್ರರೆಂಬ ) ಇಮ್ಮಡಿ ಗುರುಸಿದ್ಧ ಸ್ವಾಮಿಗಳು ಕೋಪದಿಂದ ಪರಿವಾರ ಸಹಿತ ( ೩೨ ) ಬಿರುದಾವಳಿಗಳಿಂದ ಹೊರಟು, ಸ್ವಾದೀಗ್ರಾಮದ ಬಳಿಗೈತರಲು, ಸದಾಶಿವರಾಜನು ಸ್ವಾಮಿಗಳಾಗಮಿಸಿದ ಸಂಗತಿಯನ್ನು ತಿಳಿದವನಾಗಿದ್ದರೂ, ಸ್ವಾಮಿಗಳ ದರ್ಶನಾಶೀರ್ವಾದಕ್ಕೆ ಪಾತ್ರನಾಗಲಿಲ್ಲೆಂಬ ಕೋಪದಿಂದ ಪಾದಚಾರಿಗಳಾಗಿ, ಸದಾಶಿವರಾಜನರಮನೆಯಂ ಪ್ರವೇಶಿಸಿ, ರಾಜನೆದುರಿನಲ್ಲಿ ನಿಂತು ಎಲೈ ರಾಜನೇ ನಿನ್ನ ಜ್ಞಾನವೆಂಬ ಸೂರ್ಯನಿಗೆ ಮೇಘವು ಮುಸುಕಿರುವದಲ್ಲಾ! ನಿಮ್ಮ ಗೃಹದಲ್ಲಿ ಪ್ರತಿದಿನವೂ ನಾಗುತ್ತಿರುವ ಜಂಗಮಾರಾಧನೆಯ ಕಾಲದಲ್ಲಿ, ನಮ್ಮ "ಶರಣಗಣಂಗಳಾವಾಸಮಾಡುವ, ಉಳುವಿ ಎಂಬ ಮಹಕ್ಷೇತ್ರದ ಮಹಮುನಿ ಎಂಬ ಗವಿಯಿಂದೋರ್ವ ಗಣಾಧೀಶ್ವರರು ನಿಮ್ಮ ಗೃಹಕ್ಕಾಗಮಿಸಿ, ಆರೋಗಣೆಯಂ ತೀರಿಸಿಕೊಂಡು ಮರಳಿ ತಮ್ಮಾಸ್ಥಾನಕ್ಕೆ ತೆರಳುತ್ತಿರುವದನ್ನು ಪರೀಕ್ಷಿಸಿ, ಒಂದು ದಿನ ಅವರ ಹಿಂದೆ ಹಿಂದೆ ರಾಜನು

ಹೋಗಿ ನೋಡುತ್ತಿರುವಲ್ಲಿ, ಉಳುವೆಯು ಮಹಮನಿ ಎಂಬ ಗವಿಯಂ ಪೊಕ್ಕು, ತಮ್ಮ ಹಿಂದೆ ಬರುವ ರಾಜನನ್ನು ತಿರಿಗಿ ನೋಡಿ, ಶರಣರ ವಾಸಸ್ಥಾನವಾದೀಗವಿಗೆ ನೀವು ಬರಬಾರದು, ಹಿಂದಕ್ಕೆ ತೆರಳಿ; ಎಂಬದಾಗಿ ಆ ಗಣಾಧೀಶ್ವರರು ಹೇಳಲದಕ್ಕೆ ರಾಜನು ನಮಸ್ಕರಿಸಿ, ನಾನೂ ತಮ್ಮೊಡನೆ ಬರುತ್ತೇನೆಂದು ಅರಿಕೆಮಾಡಿಕೊಳ್ಳಲು, ಗಣಾಧೀಶ್ವರರು ಭೂಲೋಕದ ಭೋಗತ್ವವನ್ನನುಭವಿಸುವದು ಇನ್ನೂ ಕೆಲವು ದಿವಸಗಳಿರುವ ಕಾರಣ, ನೀವೀಗ ಬರಲಾಗದೆಂದು ಹೇಳಿದ ಆ ಗಣಾಧೀಶ್ವರರನ್ನು ಕುರಿತು, ರಾಜನು—ಸೂರ್ಯನನ್ನು ನೋಡಿದ ಮೇಲೆ ಕತ್ತಲೆಯ ಭಯವುಂಟೇ? ಕಲ್ಪವೃಕ್ಷವೇ ದೊರೆದ ಮೇಲೆ ಅದನ್ನು ಬಿಟ್ಟು, ಜಾಲಿಯ ಮರದ ಬಳಿಗೆ ಗಮಿಸುವದಕ್ಕೆ ಮನಬರುವದೇ? ಸಾಕ್ಷಾಚ್ಛಿವಸ್ವರೂಪಿಗಳಾದ ನಿಮ್ಮನ್ನಗಲಿದು, ನಾನು ಸರ್ವಥಾ ಹಿಂದಿರಗಲಾರೆನೆಂದು ಬಿನ್ನೈಸಿಕೊಳ್ಳಲದಕ್ಕೆ ಗಣಾಧೀಶ್ವರರು—ಕಾಲವನ್ನು ಮೀರಲು ಯಾರಿಗೂ ಅಸದಳವು, ಪೂರ್ವದಪ್ರಾರಬ್ಧ ಕರ್ಮವನ್ನು ಈ ಕಾಲದಲ್ಲಿ ಅನುಭವಿಸಿ ತೀರಿಸಲಿಕ್ಕೇಬೇಕು, ನಡೆ ಎಂದು ಹೇಳಿ, ರಾಜನ ಕೈಯ್ಯಲ್ಲೊಂದು ಪುಸ್ತಕವನ್ನು ಕೊಟ್ಟು, ಈ ಪುಸ್ತಕದ ತತ್ವಗಳನ್ನಾರು ನಿನಗರುಹುವರೋ! ಅವರೇ ನಾವೆಂದು ತಿಳಿದು ಅವರಾಜ್ಞಾನುಸಾರ ವರ್ತಿಸಿ, ನಿಜಮೋಕ್ಷವನ್ನು ಹೊಂದುವದೆಂದು" ಹೇಳಿ ಕಳುಹಿಸಿದ ಮಾತುಗಳನ್ನು ಮರೆದೆಯಾ, ಯಾವ ಗಣಾಧೀಶ್ವರರು ನಿಮ್ಮಗಳಿಗೆ ಕೊಟ್ಟಿರುವ ಪುಸ್ತಕದ ಮೂಲತತ್ವವನ್ನು ಬೋಧಿಸುವ ಮೂರ್ತಿಗಳು ನಾವೇ ಎಂದು ತಿಳಿ, ಮೋಕ್ಷಾಂಗನೆಯು ನಿನ್ನನ್ನು ವರಿಸುವ ಪುಣ್ಯಮಯವಾದ ಶುಭಕಾಲಕ್ಕೆ ನಾವೇ ಮೂಲರೆಂದರಿ. ಅಜ್ಞಾನಕ್ಕವಕಾಶವಂ ಕೊಡದೆ, ಜ್ಞಾನಮಯನಾಗು, ಎಂದು ಹೇಳುತ್ತಿರುವ ಆ ಮಹಾಸ್ವಾಮಿಗಳ ವಾಕ್ಯವಂ ಕೇಳಿ, ಪೂರ್ವದವರ ಸ್ಮರಣೆ ಬಂದು, ಭಯದಿಂದೆ ನಡುಗುತ್ತಾ ಆ ಗುರುಸಿದ್ಧಸ್ವಾಮಿ ಎಂಬ ಜಗದ್ಗುರುಗಳಿಗೆ ಸಾಷ್ಟಾಂಗ ಪ್ರಣಾಮವಂಗೈದು, ವಿನಯದಿಂದ ಹಸ್ತಾಂಜುಲಿ ಪುಟನಾಗಿ, ಸನ್ನಿಧಿಯ ದರ್ಶನಾಶೀರ್ವಾದಕ್ಕೆ ಪಾತ್ರನಾಗದಿದ್ದವನು, ನನ್ನಿಂದ ಮಹತ್ವವಾದ ಅಪರಾಧವಾಯಿತು; ಕ್ಷಮಿಸಿ ಕಾಪಾಡಬೇಕೆಂದು ಬೇಡಿಕೊಳ್ಳಲು, ಸ್ವಾಮಿಗಳು ಪ್ರಸನ್ನರಾಗಿ, ಭೂಮಿಯಲ್ಲಿ ಕಾಲುಜಾರಿ ಬಿದ್ದವನು ಭೂಮಿಯನ್ನೇ ಆಶ್ರಯಿಸದ ವಿನಹ ಬೇರೆ ಯಾವ ಆಧಾರವಿರುವದು! ನಮ್ಮಲ್ಲಿ ಮಾಡಿದ ಅಪರಾಧಕ್ಕಾಗಿ ನಮ್ಮನ್ನು ಆಶ್ರಯಿಸುವದೇ ಯೋಗ್ಯವು; ಎಂದು ಬುದ್ಧಿವಾದಮಂ ಹೇಳಿ, ಮೊದಲು ಕುಮಾರಪರಮೂರ್ತಿಗಳನ್ನು ನಿನ್ನ ದೇಶದಿಂದ ಹೊರಹೊರಡಿಸೆಂದಾಜ್ಞಾಪಿಸಲಾಗಿ, ಸದಾಶಿವರಾಜನು ಆ ಪರಮ ಸ್ವಾಮಿಗಳನ್ನು ತನ್ನ ದೇಶದಿಂದ ಹೆ

ಕೆಗೆ ಹೊರಡಿಸಿದನು. ಕುಮಾರಸ್ವಾಮಿಗಳು ಸ್ವಾದೀ ಸೀಮೆಯುಂ ಬಿಟ್ಟು, ಹುಬ್ಬಳ್ಳಿಯೆಂಬ ಸ್ಥಳಕ್ಕಾಗಮಿಸಿ ಶೆಟ್ಟರು ದೈವದವರಿಗೆ ಸ್ವಾದೀರಾಜನು ಮಾಡಿದ ಸಂಗತಿಯನ್ನರುಹಿ, ಹುಬ್ಬಳ್ಳಿಯಿಂದ ವ್ಯಾಪಾರಕ್ಕೋಸ್ಕರ ಹೋಗುವ ಸಕಲ ಜೀನಸುಗಳನ್ನು ಸ್ವಾದೀಸೀಮೆಗೆ ಯಾರೂ ಕಳುಹಿಸಬಾರದೆಂತಲೂ, ಸ್ವಾದೀಸೀಮೆಯಿಂದ ಬರುವ ಯಾಲಕ್ಕಿ ಮೆಣಸು, ಅಡಿಕೆ ಮುಂತಾದ ಸಕಲ ಜೀನಸುಗಳು ಹುಬ್ಬಳ್ಳಿಗೆ ಬರಕೂಡದೆಂತಲೂ ಕಟ್ಟಳೆಯುಂ ಮಾಡಿಸಿದರು. ಇತ್ತಲಾ ಇಮ್ಮಡಿ ಗುರುಸಿದ್ಧಸ್ವಾಮಿಗಳು ಸ್ವಾದಿಯ ಸದಾಶಿವರಾಜನಿಗೆ ಆಶೀರ್ವಾದವಂ ಕೊಟ್ಟು, ಅಲ್ಲಿಂದ ಇಸಳೂರ ಮಾರ್ಗವಾಗಿ ನಗರದ ಸೀಮೆಯ ಕಡಿಗೆ ಬಿಜಯಂಗೈಸಬೇಕೆಂದು ಹೊರಟು ಶಿರ್ಶಿಯೆಂಬ ಸ್ಥಳದಲ್ಲಿ ಮುಕ್ಕಾಂ ಮಾಡಿದರು. ಆಗ ಕುಮಾರ ಸ್ವಾಮಿಗಳು ಚಿನ್ಮೂಲಾದ್ರಿಯ ಇಮ್ಮಡಿ ಗುರುಸಿದ್ಧ ಸ್ವಾಮಿಗಳ ದರ್ಶನಕ್ಕೆ ತೆರಳಬೇಕೆಂದು ಇಸಳೂರ ಮುಕ್ಕಾಮಿಗೆ ಬಂದು ಅಲ್ಲೆ ನಿಬ್ಬೆರಗಾದರು. ಈ ವಾರ್ತೆಯನ್ನು ಇಮ್ಮಡಿ ಗುರುಸಿದ್ಧ ಸ್ವಾಮಿಗಳು ಕೇಳಿ, ಇಸಳೂರಿಗೆ ಪರಿವಾರ ಸಹಿತ ಬಂದು, ಕುಮಾರಸ್ವಾಮಿಗಳ ಗದ್ದುಗೆಯನ್ನು ಮಾಡಿಸಿ, ಅಲ್ಲಿಂದ ಹಳೇಬೀಡೆಂಬ ಗ್ರಾಮಕ್ಕೆ ಬಿಜಯಂಗೈಸಿದರು. ಅಲ್ಲೆ ಖಾಸಾದ ಪಟ್ಟದಮೂರ್ತಿಗಳಿಂದ ಉಪದೇಶವಂ ಪಡೆದ ಇಬ್ಬರು ಪಟ್ಟದಸ್ವಾಮಿಗಳು ಭವಿ ಸ್ತ್ರೀ ಸಂಗವಂ ಮಾಡಿರುವರೆಂದು ಕೆಲವು ಜನ ಜಂಗಮರೂ, ಭಕ್ತರೂ ಕೂಡಿ ಫಿರ್ಯಾದಿಯುಂ ಮಾಡಲು, ಮಹಸ್ವಾಮಿಗಳು ಉಭಯಪಕ್ಷದ ಜನರನ್ನು ಕರಿಸಿ, ಸನ್ನಿಧಿಯ ಸಮಕ್ಷಮ ವಿಚಾರಣೆಯುಂ ಮಾಡಲು, ಉಭಯ ಪಟ್ಟದಸ್ವಾಮಿಗಳು, ನಿರ್ದೋಷಿಗಳೆಂದು ಕಂಡುಬಂದದರಿಂದ, ಫಿರ್ಯಾದಿಯನ್ನು ತೆಗೆದು ಹಾಕಿದರು. ಫಿರ್ಯಾದಿ ಪಕ್ಷದವರಾದ ಕೆಲವು ಜಂಗಮಯ್ಯಗಳೂ, ಕೆಂಪಾಚಾರ್ಯರೆಂಬ ವಿರಕ್ತಸ್ವಭಾವದ ಚರಮೂರ್ತಿಗಳೂ ಸಹ ಮಹ ಸನ್ನಿಧಿಯ ದರ್ಶನಾಶೀರ್ವಾದಂಗಳಿಗೆ ಹೋಗದೆ, ಮಹಸನ್ನಿಧಿಯ ಆಜ್ಞಾನುಸಾರ ವರ್ತಿಸದೆ ಇರುವ ಕಾರಣ, ಮಹಸ್ವಾಮಿಗಳು ಅವರಿಗೆಲ್ಲಾ ಬಹಿಷ್ಕಾರ ನಿರೂಪ ಸಾದರ ಮಾಡಲು, ಅವರದೊಂದು ಗುಂಪು ಒಕ್ಕಟ್ಟಾಗಿ, ಕೆಂಪಾಚಾರ್ಯರು ತಮ್ಮ ಹೆಸರಿನ ಕೆಂಪಿನ ಸಮಯವನ್ನು ಉತ್ಪನ್ನ ಮಾಡಿಕೊಂಡಿರುತ್ತಿರುವ ಕಾರಣ, ಈ ತೆರದ ಅನೇಕ ಸಮಯಗಳು ಅಂದರೆ (ಚೀಲಾಳ ಸಮಯ) (ಕುಮಾರ ಸಮಯ)(ಕೆಂಪಿನಸಮಯ) ಗಳೆಂಬ ಸಮಯಗಳುಂಟಾದವು. ಮೂಲ ಸ್ವಾಮಿಗಳಿಗೆ ಮುರಿಗ್ಯಾ ಸಮಯವೆಂಬ ಹೆಸರುಂಟಾಯಿತು. ಕುಮಾರ ಸ್ವಾಮಿಗಳು ಲಿಂಗೈಕ್ಯರಾದ ಮೇಲೆ ಹುಬ್ಬಳ್ಳಿ ಶೆಟ್ಟರು ದೈವದವರ ಸಮ್ಮತಿಯಿಂದ ಕುಮಾರ

ಸ್ವಾಮಿಗಳ ಪಟ್ಟಕ್ಕೆ ಚರಮೂರ್ತಿಗಳನ್ನು ನೇಮಿಸಿದರು. ಈಗ್ಯೂ ಹುಬ್ಬಳ್ಳಿಯಲ್ಲಿ ಕುಮಾರ ಸ್ವಾಮಿಗಳ ಮಠವೂ ಆ ಸಮಯುಕ್ಕಧಿಪತಿಗಳಾದ ಮೂರ್ತಿಗಳೂ ಸ್ವಾಮಿಗಳಾಗುತ್ತ ಕುಮಾರ ಸಮಯಾಶ್ರಿತರಾಗಿ, ಪ್ರವರ್ತಿಸುತ್ತಿರುವರು. ಶ್ರೀ ಇಮ್ಮಡಿ ಗುರುಸಿದ್ಧಸ್ವಾಮಿಗಳು ಅನೇಕ ಮಹತ್ವಂಗಳನ್ನುಂಟು ಮಾಡುತ್ತಾ, ದೇಶಗಳಲ್ಲಿ ಸಂಚರಿಸುತ್ತಾ ಅನಂತಪುರವೆಂಬ ಗ್ರಾಮಕ್ಕೆ ಬಿಜಯಂಗೈಸಿ, ತಮ್ಮ ಸನ್ನಿಧಿಯಲ್ಲಿ ಹಾಜರಿದ್ದ ಸ್ವಾದೀಚನ್ನಬಸವಸ್ವಾಮಿಗಳಿಗೆ ನಮ್ಮ ಪಶ್ಚಾತ್ ಪಟ್ಟವನ್ನು ಕಟ್ಟತಕ್ಕದ್ದೆಂದು ಹರಗುರುಚರಮೂರ್ತಿಗಳಿಗೆ ನಿರೂಪಿಸಿ ಬೈಲಾದರು. ಇವರ ತೋರಗದ್ದುಗೆಯು ಅನಂತಪುರದಲ್ಲಿರುವದು.

---

ಶ್ರೀ ಸ್ವಾದೀಚನ್ನಬಸವಾರ್ಯಾಯನಮಃ

# ೧೦ನೇ ಪಟ್ಟ

( ಉತ್ಪಲಮಾಲಾವೃತ್ತಂ )

ಶ್ರೀಗುರು ಸೋದಿ ಚನ್ನಬಸವಾರ್ಯ ಸುನಾಮವನಾಂತುಸಂತತಂ।
ಆಗ ಜಗದ್ಗುರೆಂಬ ಬಿರುದಂ ಮೆರೆಸುತ್ತಲಿ ದೇಶ ದೇಶದೋ॥
ತ್ಯಾಗದಿ ಭಕ್ತರನ್ನು ಪೊರೆವಾವಿಭು ತೋರಿದಶಂಭುಸಾಂಬನೋಲ್।
ಯೋಗಿ ಜನೌಘ ಚಿನ್ಮಯವಿಮಾರ ವಿದೂರ ಯತೀಂದ್ರನೊಪ್ಪಿದಂ॥೧॥

ಶ್ರೀ ಸ್ವಾದೀ ಚನ್ನಬಸವ ಯೋಗೀಂದ್ರರಿಗೆ ಶ್ರೀ ಇಮ್ಮಡಿ ಗುರುಸಿದ್ಧ ಸ್ವಾಮಿಗಳ ಅಪ್ಪಣೆಯ ಮೇರೆಗೆ ಚಿತ್ರದುರ್ಗದ ಚಿನ್ಮೂಲಾದ್ರಿ ಬೃಹನ್ಮಠದ ಶೂನ್ಯ ಸಿಂಹಾಸನದ ಪಟ್ಟವಾಯಿತು. ಇವರು ಶ್ರೀಶಿವಯೋಗಾನಂದ ಭರಿತರಾಗಿಯೂ ಮಹತ್ವಾತಿಶಯವುಳ್ಳವರಾಗಿಯೂ, ದಿವ್ಯತೇಜೋಮಯರಾಗಿಯೂ, ಭಕ್ತರ ಮನದಿಷ್ಟವನ್ನು ಸಂಪೂರ್ಣ ಮಾಡುವವರಾಗಿಯೂ ಇದ್ದರು. ಇವರು ಅನೇಕ ದೇಶಂಗಳನ್ನು ಸಂಚರಿಸುತ್ತಾ ಕಪ್ಪಕಾಣಿಕೆಯಂ ಭಕ್ತರಿಂದೊಪ್ಪಿಸಿಕೊಳ್ಳುತ್ತಾ ನಿತ್ಯದಲ್ಲಿಯೂ ಜಂಗಮದಾಸೋಹವಂ ಗೈಯುತ್ತಾ, ಹರಪನಹಳ್ಳಿ ಎಂಬ ಗ್ರಾಮಕ್ಕೆ ಬಿಜಯಂಗೈಸಿ, ಗುಡ್ಡದಮೇಲಿರುವ ಒಂದು ವಿರಕ್ತ ಮಠದಲ್ಲಿ, ಸಕಲ ಪರಿವಾರ ಸಹಿತವಾಗಿ ಮುಕ್ಕಾಂ ಮಾಡಿದರು. ಆಗ್ಗೆ ಅಲ್ಲಿರುವ ಭಕ್ತ ಮಹೇಶ್ವರರು ಸಾ

ನಿಗಳ ದರ್ಶನಾಶೀರ್ವಾದಕ್ಕೆ ಪಾತ್ರರಾಗಿ, ಆ ಊರಿಗರಸನಾದ ಚಂದ್ರಶೇಖರ ರಾಜನ ವಿಷಯದಲ್ಲಿ—ರಾಜನು ಒಂದು ತಿಂಗಳ ಕೆಳಗೆ ತನ್ನ ತಂದೆಯನ್ನು ಕೊಂದು, ತಾನು ರಾಜನಾಗಿರುವದರಿಂದ ಪಿತೃದ್ರೋಹಿಯಾದ ಚಂದ್ರಶೇಖರ ರಾಜನ ಮನೆಗೆ ತಾವು ಬಿಜಯುಂಗೈಸಲಾಗದೆಂದು, ಕೆಲವು ಜನರು ಅರಿಕೆ ಮಾಡಿಕೊಂಡರು. ಮತ್ತಾ ಕೆಲವು ಜನರು ರಾಜನ ಮನೆಗೆ ಬಿಜಯುಂಗೈಸಲಿಕ್ಕೆ ಏನೂ ಅಡ್ಡಿ ಇಲ್ಲವೆಂತಲೂ ಅರಿಕೆಮಾಡಿಕೊಂಡರು. ಆ ಹರಪನಹಳ್ಳಿಯ ಧೊರೆಯಾದ ಚಂದ್ರಶೇಖರ ರಾಜನು ತನ್ನ ಸಕಲಪರಿವಾರ ರಾಜವೈಭವದೊಡನೆ ಮಹಸ್ವಾಮಿಗಳ ದರ್ಶನಕ್ಕೆ ಬಂದು, ಸಾಷ್ಟಾಂಗವನ್ನೆರಗಿ, ಎನ್ನ ಗೃಹಕ್ಕಾಗಮಿಸಿ ಎನ್ನನ್ನು ಉದ್ಧರಿಸಬೇಕೆಂದು ಬೇಡಿಕೊಳ್ಳಲು, ಸ್ವಾಮಿಗಳು ತಮ್ಮ ಮನದಲ್ಲಿ ಈ ರಾಜನು ಚೀಲಾಳ ಚರಮೂರ್ತಿಗಳಿಗೆ ಆಶ್ರಯವನ್ನು ಕೊಟ್ಟಿರುವ ಗುರುದ್ರೋಹಿ, ಪಿತೃದ್ರೋಹಿ ಭಕ್ತರನ್ನು ಹಿಂಶಿಸುತ್ತಿರುವನೆಂದು ಜನರು ಪೇಳುತ್ತಿರುವ ಕಾರಣ ಭಕ್ತದ್ರೋಹ ಮುಂತಾದವುಗಳಿಂದ ಕೂಡಿರುವನಾದ ಕಾರಣ, ಇವನ ಗೃಹಕ್ಕೆ ನಾವು ಬಿಜಯುಂಗೈಸಬಾರದೆಂದು ನಿಶ್ಚಯಿಸಿಕೊಂಡು, ರಾಜನಿಗೆ ನೀನು ಪಿತೃದ್ರೋಹ ಮುಂತಾದ ಮೂರು ದ್ರೋಹಂಗಳಿಗೆ ಪಾತ್ರನಾದ ಕಾರಣ, ನಿನ್ನ ಗೃಹಕ್ಕೆ ನಾವು ಬರುವದಿಲ್ಲೆಂದು ಹೇಳಿ, ಬಹಿಷ್ಕಾರವನ್ನು ಕೊಟ್ಟ ಕಾರಣ,ಚಂದ್ರಶೇಖರರಾಜನು ವೆಸನದಿಂದಲೂ, ಸಿಟ್ಟಿನಿಂದಲೂ ಕೂಡಿದವನಾಗಿ ಹೊರಟುಹೋಗಿ, ಚೀಲಾಳಸಮಯದವರಿಗೆ ಮುಖ್ಯ ಶಿಷ್ಯನಾದನು. ಶ್ರೀಸ್ವಾಮಿಗಳವರು ಅಲ್ಲಿಂದ ಸಂಚಾರಾರ್ಥವಾಗಿ ಹೊರಟು, ಮೈಸೂರ ಸೀಮೆಗೆ ಗಮಿಸಿ, ಅಲ್ಲಿಂದ ಮಾಗಡಿ ಎಂಬ ಗ್ರಾಮದಲ್ಲಿ ಬೈಲಾದರು. ಇವರ ಕೋರಗದ್ದುಗೆಯು ಮಾಗಡಿಯಲ್ಲುಂಟು.

---

ಶ್ರೀಶಿರಹಟ್ಟೀ ಸಿದ್ಧಲಿಂಗಮಹಸ್ವಾಮಿನೇನಮಃ

## ೧೧ನೇ ಷಟ್ಕ

( ಮತ್ತೇಭವಿಕ್ರೀಡಿತ ವೃತ್ತ )

ಚಿತಚಿದಾನಂದ ಸುಖಾಬ್ಧಿ ಪೂರ್ಣವಿಲಸಜ್ಜ್ಯೋತಿರೂಪಂಮಹಾ ।
ಚ್ಯುತಿವರ್ಜ್ಯಂ ಪರ ಮಾಯಮೋಹದುರಿತೌಘಾದ್ರೀಗದಾಬಜ್ಜರಂ ॥
ಸತತಊರ್ವೀಜನ ಜಾಲವಂ ಪೊರೆಯುತಾ ಚಿನ್ಮೂಲ ಸಂಸ್ಥಾನದೋ ।

ಳತಿ ಶುದ್ಧಾಂಗಸುಮಿರ್ದ ಕಾಮುಕುಳಸಜ್ಜೀಮೂತ ಝಂಝಾನಿಲಂ ॥೧॥

ಕಂ॥ ಇಂತಿರುವಾಗುರುಸಂತತ,
ಸಂತಸವೋಳ್ಸಿರಹಟ್ಟಿ ಸಿದ್ಧಲಿಂಗಾಹ್ವಯದಿಂ ॥
ಶಾಂತಿದಯೆ ಪೂರ್ಣಗುಣದಿಂ ।
ದಾಂತಿಹ ಶ್ರೀಸ್ವಾಮಿಕಾಯಲೆಮ್ಮನುದಿನದೋಳ್ ॥೧॥

ಈ ಹನ್ನೊಂದನೆಯ ಪಟ್ಟವು ಶ್ರೀಶಿರಹಟ್ಟಿಸಿದ್ಧಲಿಂಗಸ್ವಾಮಿಗಳೆಂಬ ಯತೀಶ್ವರರಿಗಾಯಿತು. ಇವರು ಷಟ್ಸ್ಥಲ ಯತಿಕುಲತಿಲಕರಾಗಿಯೂ, ಮಹಾಮಹಿಮರಾಗಿಯೂ ಇದ್ದರು. ಇವರು (೧೫೦೦) ಗಣಸ್ತೋಮದೊಡನೆ ಮೈಸೂರ ಶ್ರೀರಂಗಪಟ್ಟಣ ವಗೈರೆ ಸ್ಥಳಗಳಲ್ಲಿ ಸಂಚರಿಸುತ್ತಾ, ಎಡೂರೆಂಬ ಗ್ರಾಮಕ್ಕಾಗಮಿಸಿದರು. ಅಲ್ಲಿರುವೋರ್ವ ಗುರುಸ್ಥಲದ ಪಟ್ಟದಪ್ಪನವರು ಆಚರಣೆಯ ವಿಷಯದಲ್ಲಿ, ದೋಷಯುಕ್ತರೆಂದು ಕೆಲವರು ಅವರನ್ನು ದೂರೈಸಿದ್ದರು; ಕೆಲವರು ಅವರೊಡನೆ ಆಚರಿಸುತ್ತಿದ್ದರು. ಈ ವಿಷಯವಾಗಿ ಒಂದು ಪಕ್ಷದ ಜನರು ಮಹಸ್ವಾಮಿಯವರ ಸನ್ನಿಧಿಯಲ್ಲಿ ಅರಿಕೆಮಾಡಿಕೊಳ್ಳಲು, ಉಭಯ ಪಕ್ಷದ ಜನರನ್ನು ಕರಿಸಿ, ಒಂದು ಸಭೆಮಾಡಿ ವಿಚಾರಿಸಲಾಗಿ, ವಿಚಾರಣಾಂತ್ಯದಲ್ಲಿ ಪಟ್ಟದಪ್ಪನವರು ನಿರ್ದೋಷಿಗಳೆಂದು ಗೊತ್ತಾದ ಕಾರಣ, ಸ್ವಾಮಿಯವರು ಪಟ್ಟದಪ್ಪನವರನ್ನು ಸ್ವೀಕರಿಸಿದ್ದಾಯಿತು. ಆಗ್ಗೆ ಪಟ್ಟದಪ್ಪನವರ ವಿರುದ್ಧ ಪಕ್ಷದವರು ಕೊಯಿಮುತ್ತೂರ ಮಲ್ಲಮ್ಮನೆಂಬ ಧೊರೆಸಾನಿಗೆ ಈ ವೃತ್ತಾಂತವನ್ನು ಪೇಳಲಾಗಿ, ಆ ಮಲ್ಲಮ್ಮನು ವಿಚಾರವನ್ನು ಮಾಡದೆ, ಸನ್ನಿಧಿಗೆ ಬಿನ್ನಹವನ್ನು ಯಾರೂ ಮಾಡಕೂಡದೆಂದು ಸರ್ವ ಜನರಿಗೆ ಕಟ್ಟಳೆಯನ್ನು ಮಾಡಿದಳು. ಈ ಸಂಗತಿಯು ಸ್ವಾಮಿಗಳಿಗೆ ಗೊತ್ತಾಗಿ, ಮಲ್ಲಮ್ಮನಿಗೆ ಬಹಿಷ್ಕಾರವನ್ನು ಕೊಟ್ಟು, ನಿರೂಪುಗಳನ್ನು ದೇಶಗಳ ಮೇಲೆಲ್ಲಾ ಪ್ರಸಿದ್ಧಮಾಡಲಾಗಿ, ಮಲ್ಲಮ್ಮನಿಗೆ ಸುಬುದ್ಧಿ ಉತ್ಪನ್ನವಾಗಿ, ಮಹಾಸನ್ನಿಧಿಯ ಬಳಿಗೈತಂದು, ಅಪರಾಧವಾಯಿತೆಂದು ಬಹು ವಿನಯಭಕ್ತಿಭಾವದಿಂದ ಪ್ರಾರ್ಥಿಸಲಾಗಿ, ಸ್ವಾಮಿಗಳು ( ೨೦೦೦ ) ಸಾವಿರ ವರಹಗಳನ್ನು ಜಂಗಮದಾಸೋಹಕ್ಕಾಗಿ ತೆಗೆದುಕೊಂಡು, ಕೊಯಿಮುತ್ತೂರ ಮಲ್ಲಮ್ಮನಿಗೆ ಶುದ್ಧನಿರೂಪವನ್ನು ದಯಪಾಲಿಸಿದರು. ಆ ನಂತರ ಅನೇಕ ವರ್ಷಗಳವರೆಗೆ ದೇಶ ಸಂಚಾರವನ್ನು ಮಾಡುತ್ತಾ, ಗೊಡಬಲದೇಶಕ್ಕೆ ಬಿಜಯಂಗೈಸಿ, ಚಂಗಡ ಹಳ್ಳಿಯಲ್ಲಿ ನಿರ್ವಯಲಾದರು. ಇವರ ತೋರಗದ್ದುಗೆಯು ಚಂಗಡಹಳ್ಳಿಯಲ್ಲುಂಟು.

ಶ್ರೀಗುರುಪಾದ ಸ್ವಾಮಿನೇನಮಃ

# ೧೨ನೇ ಪಟ್ಟ

ಉ. ಮಾ. ವೃ.

ಚಿನ್ಮಯ ಸನ್ನುತಾಂಗ ಯತಿಶೂನ್ಯಸುನಾಮದ ಸಿಂಹಪೀಠದೊಳ್ |
ಳುನ್ನತಪನ್ನಗಾಭರಣ ನೊಪ್ಪಿದ ಜಂಗಮ ಸಂಘದಿಂ ಸದಾ ||
ಸನ್ಮಹಿಮಾಂಗ ಜಾರಿ ಗುರುಪಾದ ಯತೀಂದ್ರಸುನಾಮನಾಗಳುಂ |
ನನ್ನಿಯೊಳುನ್ಮದಾದಿ ಗುಣಪೆಂಬ ಗಜಾಂಕುಶನಿರ್ವನಂದವಿಂ ||೧||

ಈ ಹನ್ನೆರಡನೆಯ ಪಟ್ಟವು ಶ್ರೀಗುರುಪಾದಸ್ವಾಮಿಗಳೆಂಬ ಷಟುಸ್ಥಲಿ ಯತಿಕುಲತಿಲಕರಿಗಾಯಿತು. ಇವರು ಚಿನ್ಮೂಲಾದ್ರಿ ಬೃಹನ್ಮಠದಲ್ಲಿ ಲಿಂಗಪೂಜಾ ಜಂಗಮದಾಸೋಹಾದಿಗಳನ್ನು ಮಾಡುತ್ತಾ, ಗಣಸಮೂಹದೊಡನೆ ಶಿವಯೋಗಾನಂದ ಸಾಮ್ರಾಜ್ಯ ವೈಭವ ಶಾಲಿಗಳಾಗಿದ್ದರು. ಕೆಲವು ದಿವಸಗಳ ಮೇಲೆ ಕೋಗುಂಡೆಂಬ ಗ್ರಾಮದಲ್ಲಿ ಚಾಂಡಾಲ ಜಾತಿಯ ಸೂಳೆ ಗೂಳಿಯಂಬೋರ್ವ ಸ್ತ್ರೀಯಳು ನೂರಿನ್ನೂರು ಲಿಂಗಾಯತರ ಸಂಗವಂ ಮಾಡಿ ತನ್ನೊಡನೆ ಸಂಗಮಾಡಿದ ಆ ಸರ್ವ ಜನರ ಲಿಂಗಗಳನ್ನು ತೆಗಿದುಕೊಂಡಿರುವಳೆಂದು, ಮಹಾ ಸನ್ನಿಧಿಗೆ ಅರಿಕೆಯಾಗಲಾಗಿ, ಮಹಸ್ವಾಮಿಗಳು ಆ ಜನರಿಗೆಲ್ಲಾ ಬಹಿಷ್ಕಾರವಂ ಕೊಟ್ಟು, ಯಾರೂ ಬಳಿಕ ಭೋಜನಾದಿ ಸಮ್ಮಿಶ್ರವಂ ಮಾಡಲಾಗದೆಂದು, ಪ್ರಸಿದ್ಧಿಸಿದ ಕಾರಣ, ಆ ಜನರೆಲ್ಲಾ ಗುಂಪಾಗಿ ಚಿತ್ರದುರ್ಗದ ಅರಸನ ಬಳಿಗೈತಂದು. ಸ್ವಾಮಿಗಳಿಂದ ನಮಗೆ ಶುದ್ಧನಿರೂಪವಂ ಕೊಡಿಸಬೇಕೆಂದು ಬಹು ವಿಧವಾಗಿ ಪ್ರಾರ್ಥಿಸಿಕೊಳ್ಳಲು, ದುರ್ಗದ ರಾಜನು ಮಹಸ್ವಾಮಿಗಳ ಸಂದರ್ಶನಕ್ಕೆ ಪೋಗಿ, ಸಾಷ್ಟಾಂಗ ಪ್ರಣೀತನಾಗಿ ಈ ಅಪರಾಧಿಜನಗಳಿಂದ ಅಪರಾಧ ಕಾಣಿಕೆಯಂ ಸಲ್ಲಿಸಿಕೊಂಡು, ಇವರನ್ನಂಗೀಕರಿಸಬೇಕೆಂಬದಾಗಿ ಬಿನ್ನೈಸಿಕೊಳ್ಳಲು, ಮಹಸ್ವಾಮಿಗಳು ಇಂಥಾ ದುರ್ಮಾರ್ಗಿಗಳಾದ ಭವಿಗಳನ್ನು ಖಂಡಿತವಾಗಿ ಸ್ವೀಕರಿಸುವದಿಲ್ಲೆಂದು ಕೋಪದಿಂದಾಡಲು, ರಾಜನು ಬೇಸರಮಾನಸನಾಗಿ, ತನ್ನ ಮನೆಗೆ ಹೊರಟು ಹೋದನು. ಇತ್ತಲಾ ಸನ್ನಿಧಿಯು ಕೋಪದಿಂದ ಈ ಊರ ಧೊರೆಯು ಇಷ್ಟು ಬೇಸರದಿಂದ ಹೊರಟು ಹೋದನಾದ್ದರಿಂದಿವನ ರಾಜ್ಯದಲ್ಲಿಯೇ ನಾವಿರಕೂಡದೆಂದು ಸನ್ನಿಧಿಯು ಸಕಲಪರಿವಾರ ಸಹಿತ ಹೊರಟು ದೇಶಂಗಳಂ ಸಂಚರಿಸುತ್ತಾ ಕ

ರ್ಗಿ ತಾಲೂಕ ಹಾಷನೂರೆಂಬ ಸ್ಥಳಕ್ಕಾಗಮಿಸಲು, ಅಲ್ಲಿರುವ ಹನುಮಂತಗೌಡ ನು ನನ್ನ ಭಕ್ತಿಯೋಳ್ಕೆಲವುದಿನವಿರ್ದು, ನಾನು ಮಾಡುವ ಶೇವಾಸತ್ಕಾರಂಗಳ ನ್ನಂಗೀಕರಿಸಿ, ಉದ್ಧರಿಸಬೇಕೆಂದು ಬಹು ವಿಧವಾಗಿ ಬೇಡಿಕೊಳ್ಳಲದಕ್ಕೆ ಸ್ವಾ ಮಿಗಳೊಪ್ಪಿ, ಆ ಹನುಮಂತಗೌಡನ ಭಕ್ತಿಯಲ್ಲಿ ಕೆಲವು ದಿನಗಳಿರ್ದು, ಅಲ್ಲಿಂದ ಗುಣಮುತ ಕಲ್ಲಿಗೆ ಬಿಜಯಂಗೈಸಿದರು. ಅಲ್ಲಿ ಅನೇಕ ದಿವಸಗಳವರೆಗೆ ಮಹತ್ವಂ ಗಳನ್ನುಂಟು ಮಾಡುತ್ತಾ ಅದೇ ಸ್ಥಳದಲ್ಲಿಯೇ ಬೈಲಾದರು. ಇವರ ತೋರಗ ದ್ದುಗೆಯು ಗುಣಮುತಕಲ್ಲೆಂಬ ಸ್ಥಳದಲ್ಲಿರುವದು.

---

ಶ್ರೀಮೂರುಸಾವಿರ ಗುರುಪಾದಸ್ವಾಮಿನೇನಮಃ

# ೧೩ನೇ ಪಟ್ಟ

॥ ಲಲಿತ ॥

ಮಂಗಲಮಹಾಮಹಿಮತುಂಗಯತಿವರ್ಯಸದ ।
ನಂಗಮುದಭಂಗ ಶಿವ ಲಾಂಛನ ಸಮನ್ವಿತ ಕು ॥
ರಂಗಧರ ಶೇಖರ ಸುರೂಪ ಶಿವಭಕ್ತಜನ ।
ಸಂಗಗುರುಪಾದ ಶಿವಯೋಗಿವರ ನಿರ್ದಗುರು ॥೧॥

ಈ ಹದಿಮೂರನೇ ಪಟ್ಟವು ಮೂರುಸಾವಿರದ ಗುರುಪಾದ ಸ್ವಾಮಿ ಯೆಂಬ ಯತಿವರ್ಯರಿಗಾಯಿತು. ಇವರು ಚಿನ್ಮೂಲಾದ್ರಿ ಬೃಹನ್ಮಠದಲ್ಲಿ ಲಿಂಗಪೂ ಜಾ ಜಂಗಮದಾಸೋಹಾದಿ ಶಿವಯೋಗ ವೈಭವಾನಂದದಿಂದಿರುತ್ತಿರ್ದು, ಶಿಷ್ಟರನ್ನು ಪರಿಪಾಲಿಸುತ್ತಾ, ದುಷ್ಟರನ್ನು ನಿಗ್ರಹಿಸುತ್ತಾ ಇರುತ್ತಿರುವಲ್ಲಿ, ಶ್ರೀರಂಗಪಟ್ಟಣದಿಂ ದ ಹೈದರಅಲ್ಲಿ ಎಂಬುವ ಮುಸಲ್ಮಾನರ ಧೊರೆಯು ಚಿತ್ರಕಲ್ಲದುರ್ಗದ ಭದ್ರವಾದ ದೊಡ್ಡ ದೊಡ್ಡ ಕಲ್ಲುಗಳಿಂದ ಕಟ್ಟಲ್ಪಟ್ಟ ದುರ್ಗವನ್ನು (ಕೋಟೆಯನ್ನು) ತನ್ನ ಸೈ ನ್ಯದೊಡನೆ ಮುತ್ತಿಕೊಂಡು, ಬಹುದಿವಸಗಳವರೆಗೆ ಅವಿಶ್ರಾಂತಶ್ರಮಪಡುತಬಟ್ಟ ರೂ ಆ ದುರ್ಗವು ಕೈಸೇರದೆ ಇರುವದನ್ನು ತಿಳಿದು, ಇದರ ಕಾರಣವೇನೆಂದು ಕೆಲ ವು ಜನರನ್ನು ವಿಚಾರಿಸಲಾಗಿ, ಈ ದುರ್ಗದ ನಾಯಕನಿಗೆ ಶ್ರೀಸ್ವಾಮಿಗಳ ಬಲ ವುಂಟು. ಇದನ್ನು ಸಾಧಿಸಲು ನಿಮಗಸಾಧ್ಯವೆಂದು ಕ್ಷುದ್ರರು ಹೇಳಲಾಜನರ

ನಾತಂ ಕೇಳ್ದು, ನವಾಬನು ಸ್ವಾಮಿಗಳ ನುತವಿರುವ ಸ್ಥಾನವಂ ಗೊತ್ತುಮಾಡಿ ಕೊಂಡು, ಆ ಮಠಕ್ಕೆ ಬಂದು ಮಠದ ಕೆಲವು ಭಾಗಂಗಳನ್ನು ಕೆಡವಿಸಿ, ವಳಪೊಕ್ಕು ರಾಜಾಂಗಣದಲ್ಲಿರುವ ಕೆಲವು ಸಾಮಾನುಗಳನ್ನು ತೆಗೆದುಕೊಂಡು, ಕರ್ತೃಗಳ ಗದ್ದುಗೆಯು ಸಮೀಪಕ್ಕೆ ಪೋಗಲುದ್ಯುಕ್ತರಾಗಲು, ನವಾಬನ ಕಣ್ಣು ಕಾಣದಂತಾಗಿ, ಹೊಟ್ಟೆಯಲ್ಲಿ ಉರಿ ತೋರಿದ್ದರಿಂದಲೂ, ಅವರ ಜನಗಳಿಗೆಲ್ಲಾ ಕಾಲುಗಳೇ ಇಲ್ಲದಂತಾದದರಿಂದಲೂ ನವಾಬನು ಹೆದರಿ ಮಹಿಮಾಪುರುಷರಾಗಿರುವೀಮಠದ ಕರ್ತೃಗಳು ದೇವರೇ ಇವರೆಂದು ಭಾವಿಸಿ, ತನ್ನಿಂದ ತಪ್ಪಾಯಿತೆಂದು ನಮಸ್ಕರಿಸಿ ಬೇಡಿಕೊಂಡು, ಮಠದ ಸಾಮಾನುಗಳನ್ನು ಮಠಕ್ಕೆ ಕೊಟ್ಟು, ತನ್ನ ಪಾಳಯಕ್ಕೆ ಹೋದನು. ಚಿತ್ರದುರ್ಗದ ಮದಕೆರಿನಾಯಕನು ೧೨ನೇ ಪಟ್ಟದ ಸ್ವಾಮಿಗಳು ಬೇಸರದಿಂದ ತನ್ನ ಸೀಮೆಯನ್ನು ಬಿಟ್ಟು ತೆರಳಿದುದಾಗಾಯ್ತು, ಈ ೧೩ನೇ ಪಟ್ಟದ ಸ್ವಾಮಿಗಳಿರುವಾಗಲೂ ಸಹ ಮಠಕ್ಕೆ ಬಾರದೆ, ಸ್ವಾಮಿಗಳಲ್ಲಿ ವಿಶ್ವಾಸವಿಲ್ಲದೆ ಗರ್ವಿಷ್ಠನಾಗಿ ವರ್ತಿಸಿದ ಕಾರಣದಿಂದ, ಕೆಲವು ದಿವಸಗಳ ಮೇಲೆ ಶ್ರೀರಂಗಪಟ್ಟಣದ ನವಾಬನು ಅವನ ದುರ್ಗವನ್ನು ಮುತ್ತಿ, ಕೋಟೆಯನ್ನು ಕೆಡವಿ, ಕೈಸೆರೆ ಹಿಡಿದೊಯ್ದನು. ಸ್ವಾಮಿಗಳವರು ಕೆಲಕಾಲ ಸುಖದಿಂದಿರ್ದು, ಬೃಹನ್ಮಠದಲ್ಲಿಯೇ ಬೈಲಾದರು. ಇವರ ತೋರಗದ್ದುಗೆಯು ಚಿನ್ಮೂಲಾದ್ರಿ ಬೃಹನ್ಮಠದಲ್ಲಿಯೇ ಇರುವದು.

---

ಶ್ರೀಮೂರುಸಾವಿರ ಶಿವಲಿಂಗಸ್ವಾಮಿನೇನಮಃ

# ೧೪ನೇ ಪಟ್ಟ

(ಚಂಪಕಮಾಲಾ ವೃತ್ತ)

ಸುರಚಿರಮೂರುಸಾವಿರ ಮಹಾ ಶಿವಲಿಂಗಸುನಾಮವಾಂತುಸ ।
ದ್ಗುರುವರಯೋಗಿವರ್ಯ ಪರವಾದಿ ಗಜಾಂಕುಶನೊಪ್ಪುತಂ ಸದಾ ॥
ಧರೆ ಜನರನ್ನು ಕಾಯುತತಿ ಮೋದದಿನೊಳಿರ್ದರು ಚಿತ್ರದುರ್ಗದೊಳ್ ।
ಕುಟಿಲತರ ನಾರಸಾರಿವಿಧುಶೇಖರ ರಕ್ಷಿಸಲೆಮ್ಮನೀಗಳುಂ ॥ ೧ ॥

ಹದಿನಾಲ್ಕನೇ ಪಟ್ಟವು ಮೂರುಸಾವಿರದ ಶ್ರೀಶಿವಲಿಂಗಸ್ವಾಮಿಗಳಿಗೆ ಕಟ್ಟಲ್ಪಟ್ಟಣವಾಯಿತು. ಇವರು ಚಿನ್ಮೂಲಾದ್ರಿ ಬೃಹನ್ಮಠದಲ್ಲಿ ಲಿಂಗಪೂಜಾ ಜಂ

ಸಮುದಾಸೋಪಾದಿ ವೈಭವದೊಡನೆ ಶಿವಯೋಗಾನಂದ ಭರಿತರಾಗಿ ಸುಖದಿಂದಿರುತ್ತಿರಲು, ಸಣ್ಣ ಬರಹದಯ್ಯನವರು, ತಡಾಕಿಮಠದ ರುದ್ರಪ್ಪನವರು, ಶಾಂತವೀರಪ್ಪನವರು, ರಾಣೇಬೆನ್ನೂರು ಕರಿಂಪುರದ ಅಸಿಶಟ್ಟರಿಗೂ, ಜೋಳದವರೆಂಬುವರಿಗೂ ಇರುವ ವ್ಯಾಜ್ಯದಲ್ಲಿ ಮಹಾ ॥ ॥ ಸನ್ನಿಧಿಯು ಆಜ್ಞೆಗೆ ವಿರೋಧವಾಗಿ ವರ್ತಿಸಿದ ಕಾರಣ, ಇವರುಗಳಿಗೆ ಬಹಿಷ್ಕಾರವಂ ಸಾದರಂಗೊಳಿಸಿದರು. ನಂತರ ಇವರುಗಳಿಗೆ ಸುಬುದ್ಧಿಯುತ್ಪನ್ನವಾಗಿ ಮಹಸಂಸ್ಥಾನದ ದರ್ಶನಾಶೀರ್ವಾದಕ್ಕೆ ಪಾತ್ರರಾಗಿ, ತಮ್ಮ ತಮ್ಮ ವಿವಹಾರಂಗಳನ್ನು ಸ್ವಾಮಿಗಳ ಅಪ್ಪಣೆಯ ಪ್ರಕಾರ ತೀರಿಸಿಕೊಂಡು, ಅಪರಾಧ ಕಾಣಿಕೆಯನ್ನೂ, ಕೈಕಾಗದವನ್ನೂ ಒಪ್ಪಿಸಿ, ಸ್ವಾಮಿಗಳ ದಯುವಂ ಪಡೆದು, ತಮ್ಮೂರಿಗೆ ಹೊರಟು ಹೋದ ಮೇಲೆ, ಕೆಲವು ದಿವಸಂಗಳಲ್ಲಿ ಮಹಾ ॥ ॥ ಸನ್ನಿಧಿಯು ರಾಣೇಬೆನ್ನೂರ ಮುಕ್ಕಾಮಿಗೆ ಬಿಜಯಂಗೈಸಲು, ರಟ್ಟೀಹಳ್ಳಿ ಪಟ್ಟದಪ್ಪನವರು ಜಕ್ಕಣಿ ಕುಂಭಾದಿಗಳನ್ನು ಪೂಜಿಸುವರೆಂದು ಸ್ವಾಮಿಗಳಿಗೆ ಗೊತ್ತಾದ್ದರಿಂದ, ರಟ್ಟೀಹಳ್ಳಿ ಪಟ್ಟದಪ್ಪನವರಿಗೆ ಅಜ್ಞಾನಿರೂಪವಂ ಸಾದರಂಗೊಳಿಸಲು, ಪಟ್ಟದಪ್ಪನವರು ಸನ್ನಿಧಿಯ ದರ್ಶನಕ್ಕೆ ಪಾತ್ರರಾಗಿ, ತಪ್ಪನ್ನೊಪ್ಪಿಕೊಂಡು ಸ್ವಾಮಿಗಳ ಅಜ್ಞಾನುಸಾರ ಪ್ರವರ್ತಿಸುವದಕ್ಕೆ ಒಡಂಬಟ್ಟು, ಬಹು ವಿಧವಾಗಿ ಪ್ರಾರ್ಥಿಸಲು, ಸ್ವಾಮಿಗಳು ಅವರನ್ನಂಗೀಕರಿಸಿದರು. ಎಲ್ಲಾ ಭಕ್ತಮಾಹೇಶ್ವರರಿಗೆ ಆಶೀರ್ವಾದವಂ ದಯಪಾಲಿಸಿ, ಮೈಸೂರಸೀಮೆಯಲ್ಲಿರುವ ಮಾಗಡಿ ಎಂಬಗ್ರಾಮಕ್ಕಾಗಮಿಸಿ ಅಲ್ಲಿಯೇ ಬೈಲಾದರು. ಇವರ ತೋರಗದ್ದುಗೆಯು ಮಾಗಡಿಯೆಂಬ ಗ್ರಾಮದಲ್ಲೀಗಳೂ ಉಂಟು.

---

ಒಪ್ಪತಿಸ್ತ ಶ್ರೀಚನ್ನವೀರಸ್ವಾಮಿನೇನಮಃ

# ೧೫ನೇ ಪದ್ಯ

॥ ಉ. ಮಾ. ವೃ. ॥

ಶ್ರೀಶಿವರೂಪ ಪಾಪತತಿಲೋಪ ಸುಭಸ್ಮವಿಲೇಪತಾಪಸಾ ।
ಧೀಶವಿನಾಶದೋಷ ಜಗದೀಶ ದಿನೇಶ ಶತಪ್ರಕಾಶವಾ ॥
ಹೇಶಸುಧೀರ ವೀರವರಮಾರ ವಿದೂರ ಗುರೂತ್ತಮಂ ಚಿದಾ ।
ಕಾಶಕೆ ಹಂಸಜ್ಯೋತಿಯನಿಮಾವಿಭುತೋರಿದ ನಶ್ರೀಯಂ ಸದಾ ॥ ೧ ॥

॥ ಕಂದ ॥ ಒಪ್ಪುವ ಗುರುವರನಂದದೊ ।
ಳೊಪ್ಪತ್ತಿನ ಚನ್ನವೀರಯಮಿಯಾಪ್ಪಯದಿಂ ॥
ದಿರ್ಪನು ಚಿನ್ಮೂಲಾದ್ರಿಯೊ ।
ಳಪ್ಪುವ ದಾಸೋಽಹ ಬಿಡದೆ ನಡೆಸುತನಿರುತಂ ॥ ೧ ॥

ಶೈಲ್ಯ ಸಿಂಹಾಸನದ ಪಟ್ಟಾಧ್ಯಕ್ಷತ್ವವು ೧೫ನೇ ಪಟ್ಟದವರಾದೀ ಒಪ್ಪತ್ತಿನ ಶ್ರೀಚನ್ನವೀರ ಮಹಸ್ವಾಮಿಯೆಂಬುವರಿಗಾಯಿತು ಇವರು ಸದಾಶ್ರೀಶಿವ ಯೋಗಾನಂದ ವೈಭವರಾಗಿ, ಜಂಗಮದಾಸೋಹವಂ ನಡಿಸುತ್ತ ಮಹಿಮಾಪುರುಷ ರಾಗಿ, ಇಹಲೋಕದ ಇಚ್ಛೆಯಿಲ್ಲದೆ ಘನವಿರಕ್ತಿ ಭಾವದಿಂದ ಲೋಕದಲ್ಲಿ ಸಂಚರಿಸುತ್ತಾ, ಮಹಿಮೆಗಳನ್ನು ತೋರಿಸುತ್ತಾ, ಸರ್ವಶಿವಭಕ್ತರಿಗೆ ದರ್ಶನಾಶೀರ್ವಾದಗಳಿಂದ ಪವಿತ್ರರನ್ನು ಮಾಡುತ್ತಾ ತಿಳವಳ್ಳಿ ಎಂಬ ಗ್ರಾಮಕ್ಕೆ ಬಿಜಯಂಗೈಸಿ, ಪಟ್ಟಾರಂಭವಾದ ೧೭ನೇ ದಿವಸ ತಿಳವಳ್ಳಿಯಲ್ಲಿ ಕೈಲಾದರು. ಇವರ ತೋರಗದ್ದುಗೆಯು ತಿಳುವಳ್ಳಿಯಲ್ಲುಂಟು. ಈ ತಿಳವಳ್ಳಿ ಎಂಬ ಗ್ರಾಮವು ಧಾರವಾಡ ಜಿಲ್ಲಾ ಹಾನಗಲ್ಲು ತಾಲೂಕಿನಲ್ಲಿರುವದು.

---

ಶ್ರೀಮದ್ವ್ಯಾಕರಣ ಸಿದ್ಧಲಿಂಗಸ್ವಾಮಿನೇನಮಃ

# ೧೬ನೇ ಪಟ್ಟ

( ಶಾ. ವಿ. ವೃತ್ತ )

ಶ್ರೀಮದ್ವ್ಯಾಕರಣಾಖ್ಯವನ್ನು ತಳೆದಾ ಶ್ರೀಸಿದ್ಧಲಿಂಗಾಹ್ವಯಂ ।
ಸ್ವಾಮಿ ಶ್ರೀ ಗುರುವಾಗಿ ಭೂಮಿತಳದೊಳ್ಚಿನ್ಮೂಲ ಶೈಲಾದ್ರಿಯೋ॥
ಳ್ಪ್ರೇಮಾನಂದದೊಳಿರ್ದನಂದು ವಿಲಸನ್ನಿರ್ವಾಯನಿರ್ಲೇಪನುಂ ।
ಕಾಮಧ್ವಂಸಸುಭಕ್ತಿ ಭಕ್ತ ಜನರಂ ಕಾಯುತ್ತ ಲುತ್ಸಾಹದಿಂ ॥ ೧ ॥

ಈ ದಿನಾರನೇ ಪಟ್ಟವು ಶ್ರೀಮದ್ವ್ಯಾಕರಣ ಸಿದ್ಧಲಿಂಗಸ್ವಾಮಿ ಎಂಬ ಯತಿಕುಲತಿಲಕರಿಗಾಯಿತು. ಇವರು ಶ್ರೀ ಕಾಶೀಕ್ಷೇತ್ರದಲ್ಲಿ ತರ್ಕವ್ಯಾಕರಣ ಮೀಮಾಂಸಾದಿ ಷಟ್ಶಾಸ್ತ್ರಂಗಳಲ್ಲಿ ಪರವಾದಿಗಳಂ ಜೈಸಿ, ದೇಶ ಸಂಚಾರವಂ ಗ

ಯ್ಯುತ್ತಾ, ಅನೇಕ ಮಹತ್ವಂಗಳನ್ನುಂಟು ಮಾಡುತ್ತಾ ದಿಗ್ವಿಜಯಶಾಲಿಗಳಾಗಿ, ಪರಮ ಪವಿತ್ರರಾಗಿ, ದಿವ್ಯತೇಜೋಮಯ ಮೂರ್ತಿಗಳಾಗಿ, ಲಿಂಗಾಂಗಸಾಮರಸ್ಯ, ಶಿವಜೀವೈಕ್ಯಸದ್ಭಾವನ ಸಂಪೂರ್ಣ ಜ್ಞಾನಿಗಳಾಗಿ, ಏನೊಂದು ತರಂಗವಿಲ್ಲದ ನಿತ್ಯಾನಂದ ಪೂರ್ಣ ಸುಖಾಬ್ಧಿಯುಳ್ಳವರಾಗಿ,ಶಿವಭಕ್ತ ಸಮೂಹದೊಳ್ಮಹಾಮಹತ್ವಂಗಳಂ ತೋರಿಸುತ್ತಾ ಮಾಗಡಿ ಎಂಬ ಗ್ರಾಮಕ್ಕೈತಂದು, ನಿರ್ಬಯಲಾದರು.ಇವರ ತೋರಗದ್ದುಗೆಯು ಮಾಗಡಿ ಎಂಬ ಸ್ಥಳದಲ್ಲುಂಟು.

---

ನೈಘಂಟ ಶ್ರೀಸಿದ್ಧವೃಷಭಸ್ವಾಮಿನೇನಮಃ

# ೧೭ನೇ ಪಟ್ಟ

ಮ. ವಿ. ವೃ.

ಮುದದಿಂ ಶ್ರೀಶಿವಯೋಗಿಯೆಂದೆನಿಸುತಂ ಶ್ರೀಸಾಂಬರೂಪಂಮಹಾ ।
ಪದಪಿಂದೀಧರೆಗೈದುಸಂಭ್ರಮದಿ ಚಿನ್ಮೂಲಾದ್ರಿಸಂಸ್ಥಾನದೋ ॥
ಳ್ಸದಯಾನಂದ ಸಮುದ್ರಸಿದ್ಧವೃಷಭಂನ್ನೈಘಂಟಸಾಮಾನ್ವಿತಂ ।
ಮದನಧ್ವಂಸನುಮಿರ್ದಭಕ್ತಜನರಂಕಾಯುತ್ತ ಸಂತೋಷದಿಂ ॥ ೧ ॥

ಶ್ರೀ ಮನ್ನೈಘಂಟಿನ ಶ್ರೀಸಿದ್ಧವೃಷಭಸ್ವಾಮಿಗಳೆಂಬ ಯತಿಕುಲತಿಲಕರಿಗೆ ಚಿನ್ಮೂಲಾದ್ರಿ ಬೃಹನ್ಮಠದ ಶೂನ್ಯಸಿಂಹಾಸನಾಧೀಶತ್ವವು ಸಂಸ್ಥಾಪಿತವಾಯಿತು. ಇವರದೇ ೧೭ ನೇಪಟ್ಟವು ಇವರು ಮಹಿಮಾಯುಕ್ತರಾಗಿ, ಕೆಲವುದಿವಸ ಬೃಹನ್ಮಠದಲ್ಲಿ ಲಿಂಗಪೂಜಾ ಜಂಗಮದಾಸೋಹಾದಿ ಕಾರ್ಯಂಗಳಂ ಗೈಯುತ್ತ ಶಿವಸಾಮ್ರಾಜ್ಯವೈಭವ ಶೀಲರಾಗಿ, ಭಕ್ತರಿಗೆ ವೀರಶೈವ ತತ್ವಾದಿಗಳಂ ಬೋಧಿಸುತ್ತಲಿರ್ದು, ಹಾವೇರಿಯೆಂಬಸ್ಥಲಕ್ಕೆ ಬಿಜಯಂಗೈಸಿದರು. ಅಸ್ಥೆ ಬನವಾಸಿಯ ಕೆಲವು ಜನರು ಹಾವೇರಿಗೆಬಂದು, ಬನವಾಸಿಯ ಗೌಡನಮಗನು ಚಾಂಡಾಲಸ್ತ್ರೀಸಂಗವಂ ಮಾಡುತ್ತಿರುವನೆಂದು ಮಹಾಸ್ವಾಮಿಗಳಿಗೆ ಅರಿಕೆಮಾಡಿಕೊಳ್ಳಲಾಗಿ, ಬನವಾಸಿಯ ಗೌಡನಮಗನನ್ನೂ, ಅಲ್ಲಿಯಭಕ್ತಮಾಹೇಶ್ವರರನ್ನೂ ಕರಿಸಿಕೊಂಡು,ಒಂದು ಸಭೆಯಂ ಕೂಡಿಸಿ ವಿಚಾರಣೆಯಂಮಾಡಲಾಗಿ, ಸಂಶಯುಕಂಡದ್ದರಿಂದ ಸಸ್ಥಾಳಾಚರಣೆಕಂಡವರಂ ತಿಳಿಸಿ, ಸಾಕ್ಷ್ಯ ಮಾಗಿರ್ದವರಂ ಸ್ವೀಕರಿಸಿ, ಆ ವ್ಯಾಜ್ಯವನ್ನು ನಿಶ್ಚೈಸ

ಸಿದರು. ಹಾವೇರಿ ಮುಕ್ಕಾಮಿನಲ್ಲಿಯೇ ಕೆಲವು ದಿವಸಗಳನಂತರ ಸ್ವಾಮಿಗಳು ನಿರ್ವಯಲಾದರು. ಇವರ ತೋರಗದ್ದುಗೆಯು ಹಾವೇರಿಯೆಂಬ ಗ್ರಾಮದಲ್ಲೀಗಲೂ ಉಂಟು.

---

॥ ಶ್ರೀರಾಜೋಟಿಸ್ವಾಮಿನೇನಮಃ ॥

# ಮಂಗಲಪದ್ಯ

ಮ. ವಿ. ವೃ.

ಭರದಿಂದಾನಳವತ್ಸರಾದಿಯೊಳಗಾರಾಜೋಟಿ ಯೋಗೀಶ್ವರಂ
ಪರಚಿನ್ಮೂಲಸುಶೈಲದೋಳ್ಗುರುವರಂ ತಾನಾಗಿಚಿದ್ರೂಪಿನಿಂ ॥
ದಿರಲಾಕೃಷ್ಣನೃಪಾಲ ತನ್ನ ಪುರಕೈತರ್ಪಂತೆ ಬಿನ್ನೈಸಲಾ ।
ಗುರುವರ್ಯಂ ಮಹಿಸೂರಿಗೈದಿದನದೇಂಸೌಭಾಗ್ಯಮೋರಾಜನಾ ॥ ೧ ॥

ಚ. ಮಾ. ವೃ.

ಪರಿಪರಿ ವಾದ್ಯನಿಸ್ವನಗಳುಣ್ಮಿರೆ ಬಂದಿದಿರೊಂದಿಸುತ್ತ ಸ ।
ದ್ವರಸರನಾಥಸಂಭ್ರಮದೊಳಾನೆಯ ಮೇಲವರನ್ನು ಮಂಡಿಸು ॥
ತ್ತಿರದತಿರಾಜವೈಭವದೊಳಾಪುರದೋಳ್ಮೆರೆಸುತ್ತೆ ಶೀಘ್ರದಿಂ ।
ದರಮನೆಗೈದಿಸಂಮುದದೊಳಾಮಣಿಪೀಠಮನಿತ್ತನಸ್ಥೆಯಿಂ ॥ ೨ ॥

ಮ. ವಿ. ವೃ.

ನಮಿಸುತ್ತಾಗಲೆಭಕ್ತಿಯಿಂ ನೃಪವರಂಪಾದಂಗಳಂಪೂಜಿಸ ।
ಲ್ಕ್ರಮದಿಂದಷ್ಟವಿಧಾರ್ಚನಾದಿವಿಧಿಯಿಂ ರತ್ನಾಳಿಯಿಂ ಪೂಗಳಿಂ ॥
ಯಮಿವರ್ಯಂಸಿರಿರಾಜ್ಯಮಸ್ತುಸತತಂ ಕಲ್ಯಾಣಮಸ್ತೆನ್ನುತಂ ।
ಉಮೆಯಾಣ್ಮಸ್ನಡಿದಂತೆರಾಜಗೊಲವಿಂಸ್ವಸ್ತಿಸ್ತುತೀಯುಂಡಸು ॥ ೩ ॥

ಉ. ಮಾ. ವೃ.

ಈತೆರದಿಂದೆವಾಗ್ಘುರಿಯುಮಂಗಲಮಜ್ಜನ ಗೈಸಿರಾಜನಿಂ ।
ದಾತುರಗಾಳಿರತ್ನಗಜಶ್ವೇತಸುಛತ್ರಸುಚಾಮರಂಗಳಂ ॥
ಪ್ರೀತಿಯೊಳಾಗಮಾದರಿಸುತಾಂದಣ ರಾಜವಿವೈಭವಂಗಳಂ ।
ಖ್ಯಾತಸಮಸ್ತರಾಜಬಿರುದಾವಳಿಯುಂಪಡೆದಂ ಗುರೂತ್ತಮಂ ॥ ೪ ॥

ಹದಿನೇಳನೇ ಪಟ್ಟದವರಾದ ಸೈಘಂಟಿನ ಶ್ರೀಸಿದ್ಧವೀರಸ್ವಾಮಿಗಳು ಹಾವೇರಿಯೆಂಬ ಗ್ರಾಮದಲ್ಲಿ ಲಿಂಗೈಕ್ಯರಾದರೆಂಬುವದನ್ನ (೧೭) ನೇಪಟ್ಟದಕೊನೆಯಲ್ಲಿ ವಿವರಿಸಲ್ಪಟ್ಟಿರುತ್ತದಷ್ಟೇ ಅವರ ಒಳಿಯಲ್ಲಿದ್ದ ಶಿಖಾ - ಶೈಲ - ಸಿಂಹಾಸನಗಳನ್ನು ಹಾವೇರಿ ಗ್ರಾಮದಲ್ಲಿರುವ ಹಸಿಬಿ ಶಿವಪ್ಪನೆಂಬ ಭಕ್ತನಬಳಿಯಲ್ಲಿಟ್ಟಿರಲು, ದುರ್ಗದ ಚಿನ್ಮೂಲಾದ್ರಿ ಬೃಹನ್ಮಠದ ಖಾಸಾದ ಚರಮೂರ್ತಿಗಳೂ ಭಕ್ತನೂಹೇಶ್ವರರೂ ಕೂಡಾ ಹಾವೇರಿ ಗ್ರಾಮಕ್ಕೆಬಂದು, ಮಠದ ಶಿಖಾ - ಶೈಲ - ಸಿಂಹಾಸನಗಳನ್ನು ಕೇಳಲು, ಹಸಿಬಿ ಶಿವಪ್ಪನು, ಶಿಷ್ಯ, ದೈವದವರು ಸಹ ಪಟ್ಟವನ್ನು ಇದೇಗ್ರಾಮದಲ್ಲಿ ಮಾಡಿಕೊಳ್ಳುತ್ತೇವೆ. ಶಿಖಾ, ಶೈಲ, ಸಿಂಹಾಸನಗಳನ್ನು ನಿಮಗೆ ಕೊಡುವದಿಲ್ಲೆಂದು ಖಂಡಿತವಾಗಿ ಹೇಳಲು, ನಿರುಪಾಯರಾಗಿ ದುರ್ಗಕ್ಕೆ ತೆರಳಿ, ಈ ವಿವರವನ್ನು ಅಲ್ಲಿಯ ಸರಕಾರಿ ಅಧಿಕಾರಿಗಳಾದ ಕರ್ನಲ್ ಇಂಜಿಸಾಹೇಬರ ಕಡೆಗೆ ಫಿರ್ಯಾದಿಯಂ ಮಾಡಲಾಗಿ, ಸಾಹೇಬರು “ ಹಾವೇರಿಗೆ ತಮ್ಮ ನಾಲ್ಕು ಜಾಮಿಸದ ಕಳಿಸಿ, ನಿಮ್ಮ ಸಾಮಾನುಗಳನ್ನು ನಿಮಗೆ ಕೊಡದಿದ್ದರೆ ಅವನ್ನೆಲ್ಲಾ ದಸ್ತಗಿರಿಯಿಂದ ಹಿಡಿತರಬೇಕೆಂದು ” ಹುಕುಂಮಾಡಲಾಗಿ, ಅವರೆಲ್ಲರೂ ಪುನಃ ಬಂದು ಕೇಳಲು ಸರ್ವರೂ ಆಲೋಚಿಸಿ, ವಿಶೇಷವಾದ ತಂಟೇತರವಲ್ಲೆಂದು ತಿಳಿದು, ಸ್ವಾಮಿಗಳ ಪಟ್ಟವು ದುರ್ಗದ ಬೃಹನ್ಮಠದಲ್ಲಿ ಆಗತಕ್ಕದ್ದು, ಆ ಪಟ್ಟವಾದ ಮೆರವಣಿಗೆಯು ಉತ್ಸಹವು ಹಾವೇರಿ ಗ್ರಾಮದಲ್ಲಿ ಆಗತಕ್ಕದ್ದೆಂದು ಹೇಳಿ, ಶಿಖಾ - ಶೈಲ - ಸಿಂಹಾಸನಗಳನ್ನು ದುರ್ಗದ ಬೃಹನ್ಮಠದ ಖಾಸಾದ ಚರಮೂರ್ತಿಗಳಿಗೊಪ್ಪಿಸಲು, ಅವುಗಳನ್ನು ತೆಗೆದುಕೊಂಡು ದುರ್ಗಕ್ಕೆಹೋಗಿ, ಬೃಹನ್ಮಠದಲ್ಲಿ ಕಲಿಶಕೆ ( ೪೮೯೭ ) ಶಾಲಿವಾಹನಶಕೆ ( ೧೭೧೮ ) ರಲ್ಲಿ ಸಣ್ಣಬರಹದ ರಾಜಕೋಟಿಸ್ವಾಮಿಗಳೆಂಬ ಷಟ್ಸ್ಥಲಮೂರ್ತಿಗಳಿಗೆ ಹಾವೇರಿಗ್ರಾಮದವರಿಗೆ ತಿಳಿಸದೆ ಪಟ್ಟವನ್ನು ಕಟ್ಟಿದರು. ಈ ಹದಿನೆಂಟನೆ ಪಟ್ಟದವರಾದ “ ಶ್ರೀಸಣ್ಣಬರಹದರಾಜಕೋಟಿ ” ಸ್ವಾಮಿಗಳು ಸಕಲ ಶಾಸ್ತ್ರ ವಿಶಾರದರಾಗಿಯೂ, ಘನವಾದ ವಿರಕ್ತಿಯಿಂದ ಕೂಡಿದವರಾಗಿಯೂ, ಮಹಾಮಹಿಮಾಶಾಲಿಗಳಾಗಿಯೂ, ಪರಗುರು ಚರಮೂರ್ತಿಗಳನ್ನು ತಮ್ಮಲ್ಲಿರಿಸಿಕೊಂಡು ಸಕಲ ದೇಶಂಗಳಿಗೂ, ಕಾಶಿ, ರಾಮೇಶ್ವರಾದಿ ಪುಣ್ಯ ಸ್ಥಳಂಗಳಿಗೂ, ದೇಶಂಗಳಲ್ಲಿರುವ ಎಲ್ಲಾವಿರಕ್ತಾಶ್ರಮದ ಚರಮೂರ್ತಿಗಳಿಗೂ, ಹೇಟಿಮನೆಶಿಷ್ಯದೈವದವರಿಗೂ, ರಾಜಾಧಿರಾಜರುಗಳ ಮಹಾಸಂಸ್ಥಾನಂಗಳಿಗೂ, ಸಹ ಆಶೀರ್ವಾದ ನಿರೂಪಗಳನ್ನು ಆವರವರ ಯೋಗ್ಯತೆಗೆ ಸರಿಯಾದ ಸನ್ಮಾನ ಲೇಖನಗಳನ್ನು ಕಳು

ಹಿಸಿ, ಸಮಸ್ತರಿಂದ ಕಪ್ಪಕಾಣಿಕೆಯಂ ತರಿಸಿಕೊಂಡು, ಶಿಷ್ಟರನ್ನು ಪರಿಪಾಲಿಸುತ್ತಲೂ, ದುಷ್ಟರನ್ನು ಶಿಕ್ಷಿಸುತ್ತಲೂ ಪ್ರತಿವರುಷವೂ ಜಂಗಮದಾಸೋಹ ದೀಪಾರಾಧನೆಯು ನಿರಾತಂಕವಾಗಿ ಸಾಗುವಂತೆ ನಿಬಂಧನಗೊಳಿಸಿ, ಶಿವಸಾಮ್ರಾಜ್ಯ ವೈಭವಶೀಲರಾಗಿದ್ದರು. ಪ್ರಾಕ್ ( ೧೩ ) ನೇಪಟ್ಟದ ಗುರುಪಾದಸ್ವಾಮಿಗಳಕಾಲಕ್ಕೆ ಶ್ರೀರಂಗಪಟ್ಟಣದ ಸುಲ್ತಾನನು ಕೆಡವಿಸಿದಮಠದ ಕೆಲವು ಭಾಗಗಳನ್ನು ಇವರು ಹೊಸದಾಗಿಕಟ್ಟಿಸಿದರು. ದುರ್ಗದ ಕಂಬಳೀ ದಾನಯ್ಯನು ತನ್ನ ಮೇಲಾರೋಪವಾದ ದೋಷಕ್ಕೆ ತಪ್ಪನ್ನುವದಿಲ್ಲೆಂದು ಮಹಾ ಸನ್ನಿಧಿಗೆ ಅನ್ನಲಾಗಿ, ಆತನಿಗೆ ಬಹಿಷ್ಕಾರನಿರೂಪವಂ ಸಾದರಗೊಳಿಸಲಾ ಕಂಬಳೀದಾನಯ್ಯನು ಅನೇಕ ದ್ರವ್ಯವನ್ನು ಖರ್ಚುಮಾಡಿ, ಸರಕಾರದ ಪರವಾನಿಗಿ ತೆಗೆದುಕೊಂಡು, ಉಜ್ಜಯನಿ, ರಂಭಾಪುರಿ ( ಬಾಳೆಹಳ್ಳಿ ) ಪರ್ವತ ಸಂಸ್ಥಾನಾಧಿಪತಿಗಳಾದ ಗುರುಸ್ಥಲದ ಸ್ವಾಮಿಗಳನ್ನು ಬಿನ್ನಹಮಾಡಿ ಕರಕೊಂಡುಬಂದು, ದುರ್ಗದ ಚಿನ್ಮೂಲಾದ್ರಿ ಬೃಹನ್ಮಠದಮುಂದೆ ಡೇರೆಗಳನ್ನು ಹೊಡಿಸಿ, ಅಲ್ಲಿ ಅವರನ್ನಿಳಿಸಿ ಉತ್ಸಹಾದಿಗಳಂ ಮಾಡತೊಡಗಿದ ವಾರ್ತೆಯು ಶ್ರೀಮದ್ರಾಜಕೋಟಿ ಸ್ವಾಮಿಗಳಿಗೆ ಅರಿಕೆಯಾಗಲು, ಸದರಿ ಮೂರು ಸಂಸ್ಥಾನದ ಸ್ವಾಮಿಗಳಿಗೆ ಬಹಿಷ್ಕಾರವಿದ್ದ ಕಂಬಳೀ ದಾನಯ್ಯನ ಸಮ್ಮಿಶ್ರ ಮಾಡಿದರೆಂದು ಬಹಿಷ್ಕಾರನಿರೂಪುಗಳನ್ನು ಎಲ್ಲಾದೇಶಗಳಲ್ಲಿ ಸಾದರಗೊಳಿಸಲು, ಸದರಿ ಮೂರು ಸಿಂಹಾಸನದವರು ಅದಂತಿಳಿದು, ಆ ಸಿಂಹಾಸನದ ಸ್ವಾಮಿಗಳು ನಮ್ಮಗಳೆಲ್ಲರಿಗೂ ಗುರುಸಂಸ್ಥಾನವಾದೀಚಿನ್ಮೂಲಾದ್ರಿ ಸ್ವಾಮಿಗಳಕೂಡಹೀಗೆ ನಾವು ವರ್ತಿಸುವದು ತಕ್ಕದ್ದಲ್ಲ,ಕಂಬಳೀದಾನಯ್ಯನ ಮಾತುಗಳನ್ನು ನಾವು ಕೇಳಿ ಇಲ್ಲಿಗೆ ಬರತಕ್ಕದ್ದಲ್ಲವೆಂದು ಮಾತುಗಳನ್ನಾಡಿ ಕೊಂಡು, ಕಪ್ಪಕಾಣಿಕೆ ತೆಗೆದುಕೊಂಡು “ ಶ್ರೀಸ್ವಾಮಿಗಳ ” ದರ್ಶನಕ್ಕೆಬಂದು, ಕಾಣಿಕೆಯನ್ನು ಸಲ್ಲಿಸಿ ಈ ದುರ್ಗದ ( ೧೩ ) ಗದ್ದಿಯಲ್ಲಿ ಸನ್ನಿಧಿ ಅಪ್ಪಣೆಯು ಶಿವಾಯ ಬರುವದಿಲ್ಲೆಂದು, ಕೈಕಾಗದವನ್ನು ಬರೆದು ಸನ್ನಿಧಿಗೆ ಒಪ್ಪಿಸಿ ಸ್ವಾಮಿಗಳ ದಯವಂ ಪಡೆದು, ತಮ್ಮತಮ್ಮ ಸಂಸ್ಥಾನವಿರುವ ತಮ್ಮಸ್ಥಾನಕ್ಕೆ ಗಮಿಸಿದರು. ಅತ್ತಲಾ ಮೈಸೂರ ರಾಜಾಧಿರಾಜ ಶ್ರೀಕೃಷ್ಣರಾಜರು ಶ್ರೀಮಚ್ಚಿನ್ಮೂಲಾದ್ರಿಬೃಹನ್ಮಠದಸ್ವಾಮಿಗಳನ್ನು ತಮ್ಮ ಸಂಸ್ಥಾನಕ್ಕೆ ಕರಿಸಿಕೊಂಡು, “ ಶ್ರೀಪಾದದ, ” ದರ್ಶನದಿಂದೆ ಧನ್ಯರಾಗಬೇಕೆಂಬುವ ಅಪೇಕ್ಷೆಯಿಂದ ಮೈಸೂರ ಮಹಾರಾಜರವರು ತಮ್ಮಧಿಕಾರಿಗಳ ಕಯ್ಯಲ್ಲಿ “ ಮಹಾಸ್ವಾಮಿಗಳ ” ಸ್ವಾರಿಯು ಬಿಜಯಂಗೈಸುವಬಗ್ಗೆ ಬಿನ್ನಹಪತ್ರವನ್ನು ಬರೆದುಕೊಟ್ಟು, ಚತುರಂಗ ಸೇನೆಸಹ ಅಧಿಕಾರಿಯನ್ನು ಕಳುಹಿಸಲು, ಮೈಸೂರಿಂದ ಹೊರಟು ದುರ್ಗದ ಬೃಹನ್ಮಠಕ್ಕೆ ಬಂದು, ರಾಜರು

ಕೊಟ್ಟಿರುವ ಚಿನ್ನದ ಪತ್ರವನ್ನು ಪಾದಕ್ಕೊಪ್ಪಿಸಿ, ಸಾಷ್ಟಾಂಗವೆರಗಿ ಅಪ್ಪಣೆಯಾಗಲೆಂದು ಕರಗಳಂ ಜೋಡಿಸಿ ನಿಂತಿರಲದಕ್ಕೆ "ಮಹಾಸ್ವಾಮಿಗಳು" ಕೃಷ್ಣರಾಜರ ಬಿನ್ನಹಕ್ಕೊಪ್ಪಿಕೊಂಡು, ಬಿರುದಾವಳಿಸಹವಾಗಿರುವ ಪರಿವಾರದೊಂದಿಗೆ ಹೊರಡುವೆವೆಂದು ರಾಜರ ಅಧಿಕಾರಿಗಳಿಗೆ ತಿಳಿಸಲು, ಆ ಅಧಿಕಾರಿಯು ಅದರಂತೆ ಮೈಸೂರ ಮಹಾರಾಜರವರಿಗೆ ತಿಳಿಸಲು, ಶ್ರೀಕೃಷ್ಣರಾಜರು ತಮ್ಮ ( ೧೨೦ ) ಗಡಿ ಸುಭೇದಾರರಿಗೆ "ಚಿನ್ಮಾಲಾದ್ರಿಯ ಸನ್ನಿಧಿಯ ಸ್ವಾರಿಯು ತಮ್ಮ ಸಂಸ್ಥಾನದ ಪದ್ಧತಿಯಂತೆ ಸಮಸ್ತ ರಾಜವೈಭವದ ಮರ್ಯಾದೆ ಬಿರುದಾವಳಿಗಳಿಂದೆ ಬಿಜಯಂಗೈಸುವದು; ಆದ್ದರಿಂದ ಯಾವತಾಲೂಕಿನ ಗ್ರಾಮದಲ್ಲಿ ಸನ್ನಿಧಿಯ ಸ್ವಾರಿಯು ದಯಮಾಡಿಸುವದೋ ಆಗ್ರಾಮದಲ್ಲಿ ಸ್ವಾಮಿಗಳ ಸರ್ವೋಪಚಾರವು ಉತ್ತಮ ರೀತಿಯಿಂದೆ ಆಗತಕ್ಕದ್ದೆಂತಲೂ, ಆಯಾಯ ಗ್ರಾಮಗಳ ಸರಕಾರೀ ಉದ್ಯೋಗಸ್ಥರೂ, ಶೆಟ್ರು ದೈವದವರೂ ಸಹ ಸಕಲ ವಾದ್ಯಂಗಳೊಡನೆ ಸಂಭ್ರಮದ ಉತ್ಸಾಹದಿಂದೆದುರ್ಗೊಂಡು ಆದರಿಸತಕ್ಕದ್ದೆಂತಲೂ, ಆ ಮಾರ್ಗದ ಸರ್ವ ಗ್ರಾಮಗಳ ಅಧಿಕಾರಿಗಳಿಗೆ ಲೇಖನದ್ವಾರತಿಳಿಸತಕ್ಕದ್ದೆಂತಲೂ" ರಹದಾರಿಯನ್ನುಂಟುಮಾಡಿಸಿದರು. ಯಾವ್ಯಾವ ಗ್ರಾಮಗಳಲ್ಲಿ ಯಾವ್ಯಾವ ರೀತಿಯಿಂದೆ ಸನ್ಮಾನಿಸಲಾಯಿತೆಂಬುವಬಗ್ಗೆ ಆಗಾಗ್ಗೆ ರಿಪೋರ್ಟಿನಿಂದ ಸಂಸ್ಥಾನಕ್ಕೆ ತಿಳಿಸುವದಾಗಿಯೂ, ಸ್ವಾಮಿಗಳ ರಾಜವೈಭವದ ಗಮನಕ್ಕೆ ಯಾರಾದರೂ ನಿರ್ಬಂಧ ಗೊಳಿಸಿದರೆ ಅವರಂ ದರ್ಖ್ಯಾಸ್ತಿಮೂಲಕವಾಗಿ ಮೈಸೂರಿಗೆ ಹಿಡಿದು ಕಳಿಸುವದೆಂಬ ರಾಜಾಜ್ಞೆಯಿಂದೆ ಸಕಲ ಭಾಗಗಳಲ್ಲಿಯೂ ತಿಳಿಸಲ್ಪಟ್ಟಿತು. ಆ ಮೇರೆಗೆ ಶ್ರೀಸ್ವಾಮಿಗಳಸನ್ನಿಧಿಯು ಮೈಸೂರಿಗೆ ಬಿಜಯಂಗೈಸಿದ ಕೂಡಲೇ ಮಹಾರಾಜರು ಸಮಸ್ತ ಪರಿವಾರದಿಂದೆ, ಸಕಲ ವಾದ್ಯಂಗಳಿಂದೆ, ಗಜ-ತುರುಗಾದಿಗಳನ್ನು ಶೃಂಗರಿಸಿಕೊಂಡೆದುರ್ಗೊಂಡು, ಸಂಭ್ರಮದ ಉತ್ಸಾಹದೊಡನೆ ಅರಮನೆಗೆ ಕರತಂದು, ರತ್ನಖಚಿತವಾದ ಸಿಂಹಾಸನದಮೇಲೆ "ಸ್ವಾಮಿಗಳನ್ನು" ಕೂಡ್ರಿಸಿ, ಬಹು ಮಾನಾರ್ಥಕ್ಕಾಗಿ (೨೧) ಅಭಿನಯ ಸೂಚಕ ತೋಫುಗಳು ರಾಜಪ್ಪಣೆಯಿಂದ ಹಾರಿಸಲ್ಪಟ್ಟವು. ಅನಂತರ ಮಹಾರಾಜರು ರತ್ನಖಚಿತವಾದ ಚಿನ್ನದ ಕುಂಭಗಳಿಂದ ನಿರ್ಮಲೋದಕವಂತಂದು, ಪಾದಪ್ರಕ್ಷಾಳನಂಗೈದು, ಆ ಪಾದೋದಕವನ್ನು ಸ್ವೀಕರಿಸಿ, ಅಷ್ಟವಿಧಾರ್ಚನೆಯ ವಿಧಿಯಿಂದಲೂ, ಷೋಡಶೋಪಚಾರಣನಿಯಮಂಗಳಿಂದಲೂ, ಸಾಂಗವಾಗಿ ಪಾದಪೂಜೆಯನ್ನು ಮಾಡಿ ಪಾದಗಳಮೇಲೆ ಅನರ್ಘ್ಯವಾದ ರತ್ನಗಳರಾಸಿಯಿಂದಲೂ, ಕನಕ ಪುಷ್ಪಂಗಳಿಂದಲೂ, ಅಭಿಷೇಕ ವೃಷ್ಟಿಯಂಗರೆದು ಅನಂತ ವಿಧವಾಗಿ

ಪ್ರಾರ್ಥಿಸಿ, ಸ್ವಾಮಿಗಳ ಸನ್ಮಾನ ಸರ್ವೋಪಚಾರಂಗಳಂ ಸಲ್ಲಿಸಲು, “ ಮಹಾಸ್ವಾಮಿಗಳು ” ರಾಜನ ಭಕ್ತಿಭಾವಕ್ಕೆ ಮೆಚ್ಚಿ, “ ಆ ಚಂದ್ರಾರ್ಕಭವದ್ವಂಶವೃದ್ಧಿರಸ್ತು, ಸಿರಿ ಸಾಮ್ರಾಜ್ಯ ರಾಜ್ಯಾಧಿಕಾರಸಮೃದ್ಧಿರಸ್ತು, ಆಯುರಾರೋಗ್ಯೈಶ್ವರ್ಯಮಸ್ತು ” ಎಂಬದಾಗಿ ಅಮೃತ ಮಯವಾದ ವಾಣಿಯಿಂದಾಶೀರ್ವಚನಮಿತ್ತು, ಕೆಲವುದಿವಸ ಮಹಾರಾಜರ ಭಕ್ತಿಮಧ್ಯ ಚರತಿಂಥಿಣಿ ಲಿಂಗಪೂಜಾ ಜಂಗಮದಾಸೋಹ ಶಿವಸಾಮ್ರಾಜ್ಯ ವೈಭವ ಶೀಲರಾಗಿ ಸುಖದಿಂದಿರುತ್ತಿರಲಿಕ್ಕೆ, ಮಹಾರಾಜರು “ ಶ್ರೀಸ್ವಾಮಿಗಳಿಗೆ ” ಸಮಸ್ತ ರಾಜವೈಭವದ ಬಿರುದಾವಳಿಗಳ ಶಾಶನ ಸನ್ನದುಗಳನ್ನು ತಮ್ಮಸಂಸ್ಥಾನದಿಂದ ಬರೆಸಿಕೊಟ್ಟು, ಬೃಹನ್ಮಠದ ದೀಪಾರಾಧನೆಯು ವ ದಾಸೋಹದ ವರ್ಪಾಶನವನ್ನು ಸ್ಥಿರವಾದ ಲೇಖದಿಂದ ಬರೆಯಿಸಿ “ ಮಹಾಸನ್ನಿಧಿಯ ” ಪಾದಕ್ಕೊಪ್ಪಿಸಿ, ಗುರುಕಾಣಿಕೆಯಂ ಸಲ್ಲಿಸಿ, ಗಜ - ತುರುಗ - ಪಲ್ಲಕ್ಕಿ ಮುಂತಾದ ರಾಜ ವೈಭವಂಗಳನ್ನೂ, ಮತ್ತೂ ರತ್ನಾದ್ಯನರ್ಘ್ಯ ಆಭರಣಾದಿ ವಸ್ತುಚಯವನ್ನೂ ಸಮರ್ಪಿಸಿ, ಈ ಸ್ವಾಮಿಗಳ ರಾಜವೈಭವಕ್ಕೆ ಯಾರಾದರೂ ತಡೆಮಾಡದೆಂದು ಆಜ್ಞಾಪತ್ರಿಕೆಯನ್ನು ದೇಶಂಗಳಲ್ಲಿ ಪ್ರಚೂರಗೊಳಿಸಿದರು. ಈ ಮೇರೆಗೆ ರಾಜಮನ್ನಣೆಯಂ ಪಡೆದು, ಅನೇಕದೇಶಂಗಳಲ್ಲಿ ಸಂಭ್ರಮದಿಂದೆ ಸಂಚರಿಸುತ್ತಾ, ಚಿತ್ರದುರ್ಗದ ಚಿನ್ಮೂಲಾದ್ರಿಬೃಹನ್ಮಠಕ್ಕೆ ಬಿಜಯಂಗೈಸಿ, ಸುಖದಿಂದಿರ್ದ ಕೆಲವು ದಿವಸಗಳಮೇಲೆ, ಸಮಸ್ತರಿಗೂ ಭವಿಷ್ಯದ್ವರ್ತಮಾನವನ್ನರುಹಿದ ಸಂಗತಿಯೇನೆಂದರೆ,— ಇನ್ನಮೇಲೆನಾಡೆದ್ದು ಈ ಸ್ಥಲದಲ್ಲಿ ಮಹೋತ್ಪಾತಂಗಳಾಗುವವು; ಆದ್ದರಿಂದ ನಾವೊಬ್ಬರೇ ದೇಶ ಸಂಚಾರಕ್ಕೆ ಹೋಗಿಬರುವೆವು. ನೀವುಗಳೆಲ್ಲಾ ಈ ಬೃಹನ್ಮಠದಲ್ಲಿ ಜೋಪಾನದಿಂದ ಇರತಕ್ಕದ್ದೆಂದು ಅಲ್ಲಿರುವ ಹರಗುರು ಚರಮೂರ್ತಿಗಳಿಗಾಜ್ಞಾಪಿಸಿ, ಒರ್ವರೇ ಪಾದಸಂಚಾರದಿಂದೆ ಚಿನ್ಮೂಲಾದ್ರಿ ಮಠವನ್ನು ಬಿಟ್ಟು ಹೊರಟು ಕೆಲವು ಯೋಜನದಾಟಿ ಬರುತ್ತಿರುವಲ್ಲಿ, ದಾವಣಗೇರಿಯೆಂಬಗ್ರಾಮಕ್ಕೆ ಸಮೀಪವಾದ ಬೇತೂರ ಗ್ರಾಮದ ಬಸಪ್ಪನೆಂಬ ಸದ್ಭಕ್ತನು ಸ್ವಾಮಿಗಳನ್ನು ಅರಣ್ಯದಲ್ಲಿಕಂಡು, ನಮಸ್ಕರಿಸಿ ಗಾಬರಿಯಿಂದೆ ಹೀಗೆ ಓರ್ವರೇ ಬಿಜಯಂಗೈಸಲು ಕಾರಣವೇನೆಂದು ವಿನಂತಿಸಿಕೊಳ್ಳಲು. ಸ್ವಲ್ಪದಿವಸಗಳಲ್ಲಿ ಮಹಾನಾಡೆದ್ದು ಬಹು ಉತ್ಪಾತಂಗಳುಂಟಾಗುವವು; ಆದ್ದರಿಂದ ಪರದೇಶಕ್ಕೆ ಗಮಿಸುವೆವೆಂದು ಅಪ್ಪಣೆಯಂ ಕೊಡಲು, ಬೇತೂರ ಬಸಪ್ಪನು ತಾವು ಸರ್ವಥಾ ಪರದೇಶಕ್ಕೆ ಗಮಿಸಲಾಗದು, ಏನುಬಂದರೂ ನೋಡಿಕೊಳ್ಳಬಹುದು, ತಾವು ನನ್ನಗೃಹದಲ್ಲಿಯೇ ನನ್ನ ಭಕ್ತಿಯುಕ್ತಿರಬೇಕೆಂದು ಬಹು ವಿಧವಾಗಿ ಪ್ರಾರ್ಥಿಸಲು, ಮಹಾಸ್ವಾಮಿಗಳು ಆ ಭಕ್ತನ ಬಿನ್ನಪದಂತೆ ಆ

ತನಮನೆಗೆ ಬಿಜಯಂಗೈಸಿ.ಸುಖದಿಂದಿರ್ದ ಕೆಲವು ದಿವಸಗಳಮೇಲೆ ಸ್ವಾಮಿಯವರು ಹೇಳಿದ ಕಾಲಜ್ಞಾನದಂತೆ ನಗರದ ಸೀಮೆಯಿಂದಲೂ, ದುರ್ಗದಸೀಮೆಯಿಂದಲೂ, ನಾಡೆಲ್ಲ ೨೦) ಸಾವಿರಜನರಗುಂಪು ಕೇರಿ, ಬೃಹನ್ಮಠದಲ್ಲಿಯೇವಾಸಮಾಡಿದರು. ಈ ಯಾವತ್ತು ಜನರು ಮಠದಲ್ಲಿರುವ ಸಾಮಾಗ್ರಿಯಿಂದಲೇ ಕೆಲವು ಕಾಲಹರಣ ಮಾಡಿ, ಸರಕಾರದಮೇಲೆ ತಿರುಗಿಬಿದ್ದು ಬಹಳ ಪುಂಡಾಟತನವನ್ನು ಮಾಡುತ್ತಾ. ಸುಲಿಗೆಯನ್ನು ಮಾಡುತ್ತಾ ಇರುತ್ತಿರುವದನ್ನು ಮೈಸೂರ " ಶ್ರೀಕೃಷ್ಣರಾಜರು " ಕೇಳಿ, ಎರಡುಸಾವಿರ ಕುದುರೆ, ಎರಡು ಸಾವಿರ ಬಾರಿನವರು ಈ ಮೇರೆಗೆ ನಾಲ್ಕುಸಾವಿರ ಸೈನ್ಯವನ್ನು ಕಳಿಸಲಾಗಿ, ಆ ದಂಡಿನವರುಬಂದು ಆ ಪುಂಡಜನರಲ್ಲಿ ನೂರಾರು ಜನರನ್ನು ಹಿಡಿದು ಸಂಕೋಲೆಗಳನ್ನು ಹಾಕಿ, ಸಾವಿರಾರು ಜನರ ಕಿವಿ ಮೂಗುಗಳನ್ನು ಕೊಯ್ದು, ಆ ಪುಂಡರ ಹಿಂಡಿಗೆ ಮುಖ್ಯರಾದವರನ್ನೆಲ್ಲಾ ಕೊಂದು, ಪುಂಡರ ತುಂಡಾಟವನ್ನೆಲ್ಲಾ ನಿಲ್ಲಿಸಿ. ನಾಡು ಸ್ವಸ್ಥವಾದ ಶಾಂತತೆಯುಂಟಾದಬಗ್ಗೆ ಮೈಸೂರಿಗೆ ತಿಳಿಸಲು, ರಾಜರು ತಮ್ಮ ಸೈನ್ಯವನ್ನೆಲ್ಲಾ ಹಿಂದಕ್ಕೆ ಕರಸಿಕೊಂಡರು. ಈ ಯಾವದ್ ವೃತ್ತಾಂತವು " ಶ್ರೀಗಳವರಿಗೆ " ಅರಿಕೆಯಾಗಿ, ನಮ್ಮ ಮಠದಲ್ಲಿ ಭವಿಗಳು ಪ್ರವೇಶಿಸಿರುವದರಿಂದ ಆ ಮಠಕ್ಕೆ ನಾವು ಗಮಿಸುವದಿಲ್ಲ. ಉತ್ತರದೇಶಕ್ಕೆ ತೆರಳುವೆವೆಂದು ತಿಳಿಸಲು, ಆ ಜೇತೂರ ಸಮಸ್ತ ಸದ್ಭಕ್ತರು ತಾವು ಯಾವ ದೇಶಕ್ಕೂ ತೆರಳಬಾರದೆಂದು ಸ್ವಾಮಿಯವರಿಗೆ ತಿಳಿಸಿ, ಈ ಸಂಗತಿಯನ್ನೆಲ್ಲಾ ಮೈಸೂರ ಶ್ರೀಕೃಷ್ಣರಾಜರಿಗೆ ತಿಳಿಸಲು, " ಶ್ರೀಸ್ವಾಮಿಗಳೆಲ್ಲಿದ್ದರೂ ಶೋಧಿಸಿ, ಉತ್ಸಾಹದಿಂದ ಮಠಕ್ಕೆ ಕಳುಹಿಸುವದಾಗಿ ಅಪ್ಪಣೆ ಕೊಟ್ಟು, ಮಠದ ಜಿಂದಿಗಿಯು ಏನು ಹೋದಾಗ್ಯೂ ಅದಕ್ಕೆ ಸರಿಯಾಗಿ ಮಹಾರಾಜರಿಂದ ದೊರೆಯುವದೆಂದು ಸ್ವಾಮಿಗಳಿಗೆ ತಿಳಿಸಿ " ತಮ್ಮಕಡೆಯ ಕಾರಭಾರಿಗಳನ್ನು ಕಳಿಸಿದರು. ಆ ಮೈಸೂರ ಸರಕಾರದ ಕಡೆಯಜನರು " ಶ್ರೀಸ್ವಾಮಿಗಳಿರುವ " ಸ್ಥಳಕ್ಕೆಬಂದು, ಯಾವತ್ತು ಸಂಗತಿಗಳನ್ನರಿಕೆಮಾಡಿ. ರಾಜರುಕೊಟ್ಟ ಲೇಖನವನ್ನು ತೋರಿಸಲು " ಶ್ರೀಗಳವರು " ಸಂತೋಷದಿಂದೆ ಬೃಹನ್ಮಠಕ್ಕೆ ಉತ್ಸಾಹದಿಂದವರೊಡನೆ ಹೊರಟು ತಲ್ಪಲು, ಆ ಮೈಸೂರ ಸರಕಾರದ ಅಧಿಕಾರಿಗಳು ಖರ್ಚಾಗಿರುವಹಣವನ್ನು ಸ್ವಾಮಿಗಳಿಗೆ ಕೊಟ್ಟು. ಸ್ವಾಮಿಗಳ ಅಪ್ಪಣೆಯಂ ತೆಗೆದುಕೊಂಡು ಮೈಸೂರಿಗೆ ತೆರಳಿದರು. ಇತ್ತಲು ಮಹಾಸ್ವಾಮಿಗಳು ಬೃಹನ್ಮಠದಲ್ಲಿ ಸುಖವಾಗಿರುತ್ತ ಕೆಲವು ದಿವಸಗಳಮೇಲೆ, ಸದಾಶಿವಪ್ಪನೆಂಬ ಭಕ್ತನಕೂಡ ಲಿಂಗಾಂಗಸಾಮರಸ್ಯ ಶಿವಜೀವೈಕ್ಯ ಸಂಧಾನವನ್ನು ಪುಸ್ತಕದಿಂದೆ ನೋಡುತ್ತಾ, ಪ್ರಸ್ತಾಪಿಸುತ್ತಾ, ಏಕಾಂತಸ್ಥಳದಲ್ಲಿ ಸಾಯಂಕಾಲದಿಂದ ಬೆಳಗಿ

ಸ ಯಾವುದವರೆಗೂ ಮೂರ್ತಮಾಡಿರುತ್ತಿರಲ್ಕೆ ನಾಳೆ ಬೆಳಗುಮೂರುತಾಸಿರಲಿಕ್ಕೆ ಈ ಶಾನ್ಯದಿಕ್ಕಿನಲ್ಲಿ ಮೋಡಂಗಳಾಗಿ, ಗುಡುಗು ಮಿಂಚು ಹುಟ್ಟುವದು. ಆಕಾಲದಲ್ಲಿ ನಾವು ಸಾಂಬಲೋಕಕ್ಕೆ ಗಮಿಸುವೆವೆಂದು ಅಪ್ಪಣೆಯಂ ಮಾಡಲು, ಆ ಭಕ್ತನು ಗಾಬರಿಯಾಗಿ ಮಠದಲ್ಲಿರುವ ಹರಗುರು ಚರಮೂರ್ತಿಗಳಿಗೂ, ದುರ್ಗದ ಶೆಟ್ಟರುದ್ಯೆವದವರಿಗೂ ತಿಳಿಸಲಾಗಿ, ಈ ವಾರ್ತೆಯು ಸರಕಾರದವರಿಗೂ ತಿಳಿಯಿತು. ಬೆಳಿಗ್ಗೆ ಆ ಎಲ್ಲಾ ಜನರು ಬಂದು, ಸ್ವಾಮಿಗಳಿಗೆ ಸಾಷ್ಟಾಂಗವೆರಗಿ, ಏನಪ್ಪಣೆಯುಂದು ಕಯ್ಯ ಜೋಡಿಸಿಕೊಂಡು ನಿಂತಿರುವಷ್ಟರಲ್ಲಿ, ಸ್ವಾಮಿಗಳು ಮಠದ ಕೈಲಾಸ ಬಾಗಿಲೆಂಬ ಬಾಗಿಲನ್ನು ತೆಗಿಸಿ, ಅಲ್ಲಿ ಮಂಚವನ್ನಿಡಿಸಿ ತಮ್ಮ ಸ್ನಾನಾನುಷ್ಠಾನ ಶಿವಪೂಜೆಯಂ ತೀರಿಸಿಕೊಂಡು, ಮಡಿಯಿಂದಲೇ ಬಂದು ಆ ಮಂಚದ ಮೇಲೆ ಪವಡಿಸಿದರು. ಆಗ್ಗೆ ಆ ಜನರು ರಾತ್ರಿ ಆರು ತಾಸಿನವರೆಗೂ, ಯಾಗು ಏನರಿಕೆಮಾಡಿಕೊಂಡಾಂಗ್ಯೂ ಯಾವಮಾತಿಗೂ ಅಪ್ಪಣೆಕೊಡದೆ ಸುಮ್ಮನಿರ್ದರು. ಸ್ವಾಮಿಗಳು ಹೇಳಿದ ಮೇರೆಗೆ ಸರಿಯಾಗಿ ಈಶಾನ್ಯ ದಿಕ್ಕಿನಲ್ಲಿ ಮೋಡವೂ, ಮಿಂಚೂ, ಗುಡುಗೂ, ಹುಟ್ಟಲಾಗಿ, ಅಲ್ಲಿರುವ ಸಹಸ್ರಾವಧಿ ಜನಗಳೆಲ್ಲಾ ಬಹಳೇ ಚಕಿತ ಮಾನಸರಾಗಿ, ಸಂತೋಷದಿಂದೆ ಮಹಾಭೇರಿ ಮುಂತಾದ ವಾದ್ಯಂಗಳಂ ಧ್ವನಿಗೈಸಿ, ಜಯುಜಯು ನಿರಂಜನ, ನಿರ್ಲೇಪ, ನಿರುಪಾಧಿನಿರ್ಮಾಯ ಗುರುವರ್ಯರೆಂದು ಆನಂದದಿಂದೆ ಕೊಂಡಾಡಿದರ್. ಆಗ್ಗೆ "ಶ್ರೀಗಳವರು" ತಾವು ಹೇಳಿದ ವೇಳೆಗೆ ಸರಿಯಾಗಿ ಸಾಂಬಲೋಕವಂ ಕುರಿತು ತೆರಳಿದರು. ಇವರ ಗದ್ದುಗೆಯುನ್ನು ಅದೇ ಬೃಹನ್ಮಠದಲ್ಲಿ ಮಾಡಿಸಿರುವರು. ಮೈಸೂರ ಸರಕಾರದವರು ಎಲ್ಲಾ ಹರಗುರು ಚರಮೂರ್ತಿಗಳ ಸಮಕ್ಷಮ ವ ಸದ್ಭಕ್ತಾದಿ ಜನರ ಸಮಕ್ಷಮ ಮಠದಲ್ಲಿರುವ ಯಾವತ್ತು ಜಂಗಮಾಸ್ತಿಯುನ್ನು ತಪಶೀಲವಾರ ಯಾದಿಯುನ್ನು ಬರೆದು, ಸರಕಾರದ ಮೊಹರುಮಾಡಿ, ಸರಕಾರದವರು ಪಹರೇ ಇಡಿಸಿದರು. ಈ ಸ್ವಾಮಿಗಳು ನಳಸಂವತ್ಸರದಲ್ಲಿ ಪಟ್ಟವಾದವರು (೩೬) ವರ್ಷ ಪಟ್ಟವನ್ನಾಳಿ, ನಂದನ ಸಂವತ್ಸರದಲ್ಲಿ ಶಿವೈಕ್ಯರಾದರು.

---

॥ ಶ್ರೀಸಾವಳಿಗೀಗುರುಶಾಂತಸ್ವಾಮಿನೇನಮಃ ॥

# ಗಾನೇಪತ್ರ

ಚ. ಮ. ವೃ.

ಉರುತರಹೇಮಲಂಬಿವರವತ್ಸರಪೌಷ್ಯಭುರೂಪವಾಂತ ಸ ।
ದ್ಗುರುವರನೆಂಬ ನಾಮವಳಿಗಿಯಾಗುರ. ಶಾಂತಸುಭವ್ಯಯೋಗಿಯುಂ ॥
ಸುರಚಿರ ತಿಂಗಳಾಶ್ವಿಜದಿ ನೇಮಿಸಿ ಶೂನ್ಯಸುದಿವ್ಯಪಟ್ಟಕೇ ।
ಮೆರಸಿದರಾಗ ದೇಶದೊಳಗಾಗುರುವೀತನೆಎಂದುಮೋದದಿಂ ॥೧॥

ಹದಿನೆಂಟನೇ ಪಟ್ಟದವರಾದ ಶ್ರೀರಾಜಕೋಟಿ ಸ್ವಾಮಿಗಳು ಸಾಂಬಲೋಕಕ್ಕೆ ತೆರಳಿದ ನಂತರ, ಮಠದ ಜಿಂದಿಗಿಯಮೇಲೆ ಸರಕಾರದವರು ಪಹರೆಯನಿಟ್ಟರು. ಮೈಸೂರಿಂದೆ ಬಸವಲಿಂಗದೇವರೆಂಬ ಚರಮೂರ್ತಿಗಳು ಬರಲಾಗಿ ಚಿತ್ರದುರ್ಗದ ಡಿಸ್ಟ್ರಿಕ್ಟಿನ ಕೆಲವು ಗ್ರಾಮದ ಗೌಡರು ಮೈಸೂರ ಬಸವಲಿಂಗ ದೇವರಿಗೆ ಪಟ್ಟವನ್ನು ಕಟ್ಟಬೇಕೆಂದು ಬೃಹನ್ಮಠದಲ್ಲಿರುವ ಹರಗುರು ಚರಮೂರ್ತಿಗಳಿಗೆ ತಿಳಿಸಲಾಗಿ, ಅವರ. ಸಮಸ್ತದೇಶಗಳ ಭಕ್ತಮಾಹೇಶ್ವರರ ಸಮ್ಮತಿಯಿಂದೆ ಈ ಚಿನ್ಮೂಲಾದ್ರಿಪಟ್ಟವು ನೇಮಿಸಲ್ಪಡುವ ಪ್ರಚಾರವುಂಟು; ಅದ್ದರಿಂದ ಸಮಸ್ತ ವೀರಶೈವ ಮತದ ದೇಶಾದೇಶಗಳ ಭಕ್ತಮಾಹೇಶ್ವರರಿಗೆ ತಿಳಿಸೋಣವೆಂದಾಡಲು, ಆಗೌಡರು ಬಸವ ದೇವರಿಗೇ ಪಟ್ಟವಾಗಬೇಕೆಂದು ಖಂಡಿತವಾಗಿ ಹೇಳಿ, ಅವರ ಪಕ್ಷವನ್ನು ವಹಿಸಿದ ಕಾರಣ ಎರಡು ಪಕ್ಷಗಳುಂಟಾದವು. ಆ ದೇಶದ ಸಮಸ್ತ ಗೌಡರು ಎರಡು ಸಾವಿರ ಜನಗಳವರೆಗ ಗುಂಪುಗೂಡಿ ಜುಲುಮೆಯಿಂದೆ ಮೈಸೂರ ಬಸವ ದೇವರಿಗೆ ಪಟ್ಟವಂ ಗಟ್ಟಲುದ್ಯೋಗಿಸಲು, ಬೃಹನ್ಮಠದಲ್ಲಿರುವ ಭಕ್ತಮಾಹೇಶ್ವರರು ಅದಕ್ಕೆ ಪ್ರತಿಪಕ್ಷದವರಾಗಿ ಅಡ್ಡಮಾಡಿ, ಸಮಸ್ತ ದೇಶಮಧ್ಯದಲ್ಲಿರುವ ಭಕ್ತ ಮಾಹೇಶ್ವರರಿಗೆ ಈ ಸಂಗತಿಯನ್ನು ಲೇಖನದ್ವಾರ ತಿಳಿಸಲು, ಚಿತ್ರದುರ್ಗ - ದಾವಣಗೇರಿ - ಹರಿಹರ - ರಾಣೇಬೆನ್ನೂರು - ಬ್ಯಾಡಿಗಿ - ಹಾವೇರಿ - ಬಂಕಾಪುರ - ಶಿರ್ಸಿ - ಶಿದ್ಧಾಪುರ-ಮುಂತಾದ ದೊಡ್ಡದೊಡ್ಡ ಗ್ರಾಮಗಳ ಚರಮೂರ್ತಿಗಳೂ,ಭಕ್ತಮಾಹೇಶ್ವರರೂ, ಶಟ್ಟರೂ ದೈವದವರೂ ಸಹವಾಗಿ ಅನೇಕಜನರು ಬೃಹನ್ಮಠದಲ್ಲಿ ಶೇರಿ ಒಂದು ದೊಡ್ಡಸಭೆಯಂ ಕೂಡಿಸಿ, ಇಪ್ಪತ್ತೊಂದು ಸಾವಿರ ಮಠಮಹಂತದವರೂ, ಸರ್ವದೇಶಗಳ ವೀರಶೈವ ಸಮಸ್ತ ಭಕ್ತರೂ ಕೂಡಿ, ಶೂನ್ಯಸಿಂಹಾಸನದ ಪಟ್ಟಾಧ್ಯಕ್ಷರನ್ನು ಆರಿಸತಕ್ಕದ್ದೆಂದು ಹೇಳಲು, ಆ ದೇಶದ ಗೌಡರಗುಂಪು ಮೈಸೂರ ಬಸವದೇವರಿಗೇ ಪಟ್ಟವಾಗತಕ್ಕದ್ದೆಂದು ಅಡಲು,ಅವರ ಮಾತಿಗೆ ಸಮಸ್ತ ದೇವಾಭಕ್ತರು ಒಪ್ಪಲಿಲ್ಲವಾದ್ದರಿಂದೀ ಉಭಯ ಪಕ್ಷದವರಲ್ಲಿ ವಾದವಿವಾದವಾಗಿ ಕೋರ್ಟಿನಲ್ಲಿ

ಫಿರ್ಯಾದೆಯನ್ನು ಮಾಡಲು, ಕೆಳಗಣ ಎರಡು ಮೂರು ಕೋರ್ಟುಗಳಲ್ಲಿಯೂ, ಆಖೈರ ಕೋರ್ಟಿನಲ್ಲಿರುವ ನ್ಯಾಯಾಧೀಶರು ಸಹ ಸಮಸ್ತ ದೇಶದ ಶಿವಭಕ್ತರೂ, (೨೧) ಸಾವಿರ ಮಠಮುಹಂತು ಅಂದರೆ, ಸಮಸ್ತ ದೇಶಗಳ ಹರಗುರು ಚರಮೂರ್ತಿಗಳೂ, ಬೃಹನ್ಮಠದಲ್ಲಿ ಕೂಡಿದ ಸಮಸ್ತ ಭಕ್ತ ಮಾಹೇಶ್ವರರುಗಳ ಒಪ್ಪಿಗೆಯ ಪ್ರಕಾರ ಪಟ್ಟ ವಾಗತಕ್ಕದ್ದೆಂದು ಫೈಸಲ್ಮಾಡಿ, ಗೌಡರ ಪಕ್ಷವನ್ನು ರದ್ದು ಪಡಿಸಿದರು. ಅಷ್ಟಕ್ಕೆ ಗೌಡರು ಶಾಂತರಾಗದೆ ಮಠದಲ್ಲಿ ಧಾಂದಲೆಯನ್ನು ಮಾಡಿದ ಕಾರಣ ಅದನ್ನು ಸರಕಾರಕ್ಕೆ ತಿಳಿಸಲು, ಸರಕಾರದಿಂದ ಬಂದೋಬಸ್ತಿಗಾಗಿ (೫೦೦) ಕುದುರೆ ಸ್ವಾರರು (೫೦೦) ಸೈನ್ಯದವರು ಬಂದು ನಿಲ್ಲಲಾಗಿ, ಗೌಡರ ಸಮೂಹದ ಆಟವು ಸಾಗದೆ ನಿರಾಶರಾಗಿ, ತಮ್ಮ ತಮ್ಮ ಊರುಗಳಿಗೆ ತೆರಳಿದರು.

ಇತ್ತ ಶ್ರೀರಾಚೋಟಿ ಸ್ವಾಮಿಗಳ ಲಾಗಾಯತು ಮೂರು ವರ್ಷಗಳ ವರೆಗೆ ಪಟ್ಟವಿಲ್ಲದೆ ನಿಂತಿರಲಾಗಿ,ಹೇಮಲಂಬಿ ಸಂವತ್ಸರದ ಅಶ್ವಿಜ ಶುದ್ಧ ವಿಜಯ ದಸಮಿಯ ಶುಭ ದಿನದಲ್ಲಿ ಸಮಸ್ತ ದೇಶಗಳ ಭಕ್ತ ಮಾಹೇಶ್ವರರು ಕೂಡಿ, "ಶ್ರೀಸಾವಳಗಿ ಗುರುಶಾಂತ ಸ್ವಾಮಿ" ಗಳೆಂಬ ಶಿವಯೋಗೀಶ್ವರರಿಗೆ ಪಟ್ಟವಂಗಟ್ಟಿ, ಶಿಖಾ - ಶೈಲ - ಸಿಂಹಾಸನ - ಮಠದ ಸಮಸ್ತ ಜಿಂದಿಗೆಯನ್ನು ಸಹ ಒಪ್ಪಿಸಿದರು. ಸರಕಾರದಿಂದ ,, ಸ್ವಾಮಿಗಳಿಗೆ" ಒಪ್ಪಿಸಲ್ಪಟ್ಟ ಬಗ್ಗೆ ಮೈಸೂರ ಮಹಾರಾಜರವರಿಗೆ ಲೇಖನ ದ್ವಾರ ತಿಳುಹಿಸಲಾಯಿತು. ಈ "ಸ್ವಾಮಿಗಳು" ದಿವ್ಯ ತೇಜೋಮಯರಾಗಿಯೂ, ಯತಿಕುಲ ತಿಲಕರಾಗಿಯೂ ಇದ್ದು, ಬೃಹನ್ಮಠದ ಹಿಂದು ಗಡೆಯಲ್ಲಿ ಅರಣ್ಯವಾಗಿರುವ ಪ್ರದೇಶದಲ್ಲಿ ಒಂದುವನವನ್ನು ಮಾಡಿಸಿ, ಆ ವನದಲ್ಲಿ ಚಿದ್ವಿಲಾಸ ಮಂದಿರೆ, ಅನುಭವ ಮಂಟಪ, ಚಿದಾರಣ್ಯ ಮುಂತಾದವುಗಳನ್ನು ಕಟ್ಟಿಸಿದರು. ಇವರು ಲಿಂಗಪೂಜಾ ಜಂಗಮ ದಾಸೋಹಾದಿ ಕಾರ್ಯಂಗಳಲ್ಲಿ ಧುರಂಧರರಾಗಿ, ಶಿವ ಯೋಗಾನಂದದಿಂದಿರುತ್ತಿರಲಿಕ್ಕೆ ಸ್ವಾದಿಯ ಬಸವಲಿಂಗರೆಂಬ ರಾಜರಿಗೂ, ರಾಜರ ತಾಯಿಗಳಿಗೂ ಕಲಹ ಉಂಟಾಗಿ, ಬಸವಲಿಂಗ ರಾಜರು ಕಾಶಿಗೆ ವೈಮನಸ್ಸಿನಿಂದ ತೆರಳುವರೆಂಬ ವಾರ್ತೆಯನ್ನು ಕೇಳಿ, "ಮಹಾ ಸನ್ನಿಧಿಯು" ದರ್ಶನಾಶೀರ್ವಾದಕ್ಕೆ ಪಾತ್ರರಾಗಬೇಕೆಂದು ನಿರೂಪು ಸಾದರ ಗೊಳಿಸಿ, ಬಸವಲಿಂಗ ರಾಜರನ್ನು ಕರಿಸಿಕೊಂಡು, ಅವರ ತಾಯಿಗೂ ಒಂದು ನಿರೂಪು ಬರೆಸಿ ಕರೆಸಿ, ಆ ಮಾತೃ ಪುತ್ರರಲ್ಲಿರುವ ವೈಮನಸ್ಸನ್ನು ಹೋಗಲಾಡಿಸಿ, ಆಜನ್ಮ ಪರಿಯಂತರವೂ ವೈಮನಸ್ಸುಂಟಾಗದಂತೆ ಉಭಯರಿಂದಲೂ ಪ್ರಮಾಣ ಪೂರ್ವಕವಾಗಿ ಸಾಷ್ಟಾಂಗವನ್ನು ಹಾಕಿಸಿಕೊಂಡು, ಪುಂಗನೂರ ಸಂಸ್ಥಾನಕ್ಕೆ ಚರಮೂರ್ತಿಗಳನ್ನು ಕಳುಹಿಸಿ, ಪುಂ

ಗನೂರ ಧೊರೆಗಳ ಮಗಳನ್ನು ಸ್ವಾದಿಯ ಬಸವಲಿಂಗ ರಾಜರಿಗೆ ಕೊಡುವಂತೆ ಗೊತ್ತು ಮಾಡಿ, ಬಸವಲಿಂಗ ರಾಜರನ್ನು ಪುಂಗನೂರಿಗೆ ಕಳುಹಿಸಲು "ಮಹಾಸನ್ನಿಧಿಯ" ಅಪ್ಪಣೆಯ ಮೇರೆಗೆ ಪುಂಗನೂರ ಧೊರೆಯು ತನ್ನ ಮಗಳನ್ನು ಸ್ವಾದಿಯ ರಾಜರಿಗೆ ಕೊಟ್ಟು, ಸಂಭ್ರಮದಿಂದ ಲಗ್ನವನ್ನು ಮಾಡಿಸಿ, ಆ ದಂಪತಿಗಳೀರ್ವರನ್ನೂ ಬೃಹನ್ಮಠದ "ಶ್ರೀಗಳವರ" ದರ್ಶನಕ್ಕೆ ಕಳುಹಿಸಿ, ಬಿನ್ನಹ ಪತ್ರದಿಂದ ಅಪ್ಪಣೆಯ ಮೇರೆಗೆ ಲಗ್ನವನ್ನು ಮಾಡಿ, ಸನ್ನಿಧಿಗೆ ದಂಪತಿಗಳನ್ನು ರವಾನಿಸಿರುತ್ತೇನೆಂದು ಅರಿಕೆ ಮಾಡಿಕೊಂಡನು. ಆ ದಂಪತಿಗಳು ಬೃಹನ್ಮಠಕ್ಕೆ ಬಂದ ಮೇಲೆ ಸ್ವಾದೀಬಸವಲಿಂಗ ರಾಜರ ತಾಯಿಯ ಕಡೆಗಿರುವ ಸಂಸ್ಥಾನದ ಮೊಹರು ವಗೈರೆ ತರಿಸಿ ಕೊಂಡು, ಬಸವಲಿಂಗ ರಾಜರ ಸ್ವಾಧೀನಕ್ಕೊಪ್ಪಿಸಿ, ಗೋವೆಯ ಪ್ರಾಂತಿಗೂ, ಸ್ವಾದಿಯ ಸೀಮೆಗೂ,ಬಸವಲಿಂಗರಾಜರೇ ಧೊರೆಯೆಂದುಸರಕಾರದಿಂದ ಲೇಖನವನ್ನು ತರಿಸಿ, ತಾಯಿಯನ್ನು ಚನ್ನಾಗಿ ಸಂರಕ್ಷಿಸುವಂತೆ ಆಜ್ಞೆಯನ್ನಿತ್ತು, ಬಸವಲಿಂಗರಾಜರಿಗೂ, ಅವರ ತಾಯಿಗೂ ,ಅವರ ಹೆಂಡತಿಗೂ ಆಶೀರ್ವಾದವಂ ದಯ ಪಾಲಿಸಿ, ಹರಕೆಯನ್ನಿತ್ತು, ಅವರ ರಾಜಧಾನಿಗೆ ಕಳುಹಿಸಿದರು ಹೊಳಲ ಕೇರಿ ಗ್ರಾಮದ ಪ್ರಭುದೇವರ ಬಸಪ್ಪನೆಂಬ ಭಕ್ತನು ಒಂದು ಆಚಾರದ ವಿಷಯದಲ್ಲಿ "ಮಹಾ ಸನ್ನಿಧಿಯ" ಆಜ್ಞೆಯಂತೆ ವರ್ತಿಸದೆ, ಉಜ್ಜಯನಿ "ಸಿಂಹಾಸನದ ಶ್ರೀಗಳನ್ನು" ತನ್ನ ಗ್ರಾಮಕ್ಕೆ ಕರಿಸಿಕೊಂಡಿರುವನೆಂಬುವ ವಾರ್ತೆಯನ್ನು ಕೇಳಿ ಸಂತಪ್ತರಾಗಿ, ಬಸಪ್ಪನು ಉಜ್ಜಯನಿಯವರನ್ನು ಹೇಗೆ ಕರೆದುಕೊಂಡು ಬಂದ? ಸಿಂಹಾಸನದವರು ಹೇಗೆ ಬಂದರು? ಎಂದು ವಿಚಾರಿಸುವಬಗ್ಗೆ ಬೃಹನ್ಮಠದ ಪಾರುಪತ್ಯಗಾರರನ್ನು ಹೊಳಲಕೇರಿಗೆ ಕಳುಹಿಸಲು, ಆಪಾರುಪತ್ಯಗಾರರು ಅಪ್ಪಣೆಯ ಪ್ರಕಾರ ಹೋಗಿ, ಅವರಿಗೆಷ್ಟು ರೀತಿಯಿಂದ ಪೇಳಿದರೂ ಅದನ್ನು ಲಕ್ಷಕ್ಕೆ ತಾರದೆ, ಇವತ್ತಿನ ದಿವಸ ಸಿಂಹಾಸನದವರನ್ನು ಉತ್ಸಾಹದಿಂದ ಬಸಪ್ಪನು ತನ್ನ ಮನೆಗೆ ಕರೆದುಕೊಂಡು ಪೋಗುವನೆಂದು ಬಂದು "ಮಹಾಸನ್ನಿಧಿಗೆ" ಅರಿಕೆಯಂ ಮಾಡಲು, "ಶ್ರೀಸ್ವಾಮಿಗಳು" ಮಹಾ ಕೋಪದಿಂದ ಕರ್ತರ ಗದ್ದುಗೆಯ ಬಳಿಗೈತಂದು, "ಮುರಿಗೇಶ ಸೋತ, - ಬಸಪ್ಪನು ಗೆದ್ದ"ಎಂದು ನುಡಿದು ಭೇರಿಯನ್ನು ಹೊಡಿಸಲು, ಹೊಳಲಕೇರಿಯಲ್ಲಿ ಪ್ರಭುದೇವರ ಬಸಪ್ಪನು ಉಜ್ಜಯನಿ ಸಿಂಹಾಸನದವರನ್ನು ಉತ್ಸಾಹದಿಂದ ತನ್ನ ಮನೆಗೆ ಕರೆದುಕೊಂಡು ಹೋಗುವ ಸಮಯದಲ್ಲಿ, ಹದಿನಾರು ವರುಷದ ಬಸಪ್ಪನ ಮಗನು ಹೊಟ್ಟೆಯುಬ್ಬರಿಬಿದ್ದು ತಾಳಲಳವಲ್ಲದೆ ಭಾವಿಯಲ್ಲಿ ಬಿದ್ದು ಸತ್ತನೆಂಬ ವಾರ್ತೆ ಬರಲಾಗಿ, ಬಸಪ್ಪನು ಶೋಕಿಸುತ್ತ ಆ ಉತ್ಸಾ

ಹವನ್ನಲ್ಲೆಯೇ ಬಿಟ್ಟು, ಮಗನನ್ನು ನೋಡಲು ಅತ್ತ ಪೋದನು. ಇತ್ತ ಉಜ್ಜಯನಿಯ ಸಿಂಹಾಸನಾಧಿಪತಿಗಳು ಈ ಬಸಪ್ಪನ ಮಾತಿನಿಂದೆ ನಾವು ಇಲ್ಲಿಗೆ ಬರಬಾರದಿತ್ತು ಒಳಗಡೆಯುಲ್ಲಿ ದುರ್ಗದ ( ೧೩ ) ಗಡಿಗಳಲ್ಲಿ ನಾವು ಬರುವದಿಲ್ಲೆಂದು " ಚಿನ್ಮೂಲಾದ್ರಿ ಮಹಾಸ್ವಾಮಿಗಳಿಗೆ " ಸಾಷ್ಟಾಂಗವನ್ನೆರಗಿ, ಕಯ್ಯಾಗದವನ್ನು ಬರಕೊಟ್ಟು, ಈ ರೀತಿಯಿಂದೆ ನಾವು ವರ್ತಿಸಿದ್ದು ಜಯುವಾಗಲಿಲ್ಲೆಂದು ಭಾವಿಸಿ, ಆಗಿಂದಾಗಲೇ ತಮ್ಮ ಸ್ಥಳಕ್ಕೆ ಹೊರಟು ಹೊದರು. ಈ ವಾರ್ತೆಯನ್ನು ಚಿನ್ಮೂಲಾದ್ರಿ ಬೃಹನ್ಮಠದ " ಮಹಾಸ್ವಾಮಿಗಳು " ಕೇಳಿ, ಪುನಃ ಕರ್ತರ ಗದ್ದುಗೆಯ ಹತ್ತರ ಆಗಮಿಸಿ, " ಮುರಗೇಶ ಗೆದ್ದಾ, - ಬಸಪ್ಪ ಸೋತ " ಎಂಬದಾಗಿ ಜಯಭೇರಿಯನ್ನು ಹೊಡಿಸಿದರು. ( ಮಹನೀಯರ ಸಂತಾಪಕ್ಕೆ ಕಾರಣನಾದ ಪುರುಷನು ಜಗತ್ತಿನಲ್ಲಿ ಜೀವಿಸುವದುಂಟೇ! ) ಎಂಬ ವಚನಾಣ್ಣುಡಿಯಂತೆ ಹೊಳಲಕೇರಿಯ ಪ್ರಭುದೇವರ ಬಸಪ್ಪನು ಹುಚ್ಚನಂತೆ ನೆಲದಲ್ಲಿ ಹೊರಳಾಡಿ, ಹುಡಿಯಿಂತುಂಬಿದ ಮೈಯುಳ್ಳವನಾಗಿ, ಚಿನ್ಮೂಲಾದ್ರಿಯ " ಸ್ವಾಮಿಗಳ " ಶಾಪದಿಂದೆ ಕೆಲವು ದಿವಸಗಳಲ್ಲಿ ಐಶ್ವರ್ಯವನ್ನೆಲ್ಲಾ ಕಳೆದುಕೊಂಡು, ಭ್ರಾಂತನಾಗಿ, ಸುಬುದ್ಧಿ ಹುಟ್ಟಿ ದುರ್ಗಕ್ಕೆ ಬಂದ ,ಚಿನ್ಮೂಲಾದ್ರಿ ಮಠದ ಬಳಿಗೈತಂದು ಆರುತಿಂಗಳವರೆಗೂ ಸನ್ನಿಧಿಯ ದರ್ಶನದ ಹಾರೈಕೆಯಿಂದೆ ಕಾದುಕೊಂಡಿದ್ದರೂ " ಮಹಾಸ್ವಾಮಿಗಳ " ದರ್ಶನವಾಗದೇ ಹೋದ್ದರಿಂದ ವ್ಯಾಕುಲ ಚಿತ್ತನಾಗಿ, ದುಃಖಿಸುತ್ತಾ ಚಿತ್ರಕಲ್ದುರ್ಗದ ಪೇಟೆ ಮನೆ ಶೆಟ್ಟರು ದೈವದವರಿಗೆ ಈ ವಿಷಯವಾಗಿ ಬಹು ವಿಧವಾಗಿ ಹೇಳಿಕೊಳ್ಳಲಾ ಶೆಟ್ಟರು ದೈವದವರು " ಮಹಾಸನ್ನಿಧಿಗೆ " ಬಂದು, ಹೊಳಲಕೇರಿಯ ಪ್ರಭುದೇವರ ಬಸಪ್ಪನು ಪಾದ ದರ್ಶನಕ್ಕೋಸ್ಕರ ಆರುತಿಂಗಳು ಕಾದು ಬಿದ್ದಿರುತ್ತಾನೆ. ಶರಣಾಗತರನ್ನ ರಕ್ಷಿಸುವದೂ, ಉದಾಸೀನರನ್ನು ಶಿಕ್ಷಿಸುವದೂ, " ಶ್ರೀಗಳವರ " ಕರ್ತವ್ಯವಿರುವದರಿಂದೆ, ಬಸಪ್ಪನ ಮೇಲೆ ಕೃಪೆಯಾಗಬೇಕೆಂದು ವಿನಯದಿಂದ ಬಹು ವಿಧವಾಗಿ ಪ್ರಾರ್ಥಿಸಲು, ದಯಪುಟ್ಟಿ, ಬಸಪ್ಪನನ್ನು ಕರಿಸಿಕೊಂಡು, ಅಪರಾಧ ಕಾಣಿಕೆಯಂ ಸಲ್ಲಿಶಿಕೊಂಡು, ನೀತಿಯ ಬೋಧವಂ ಪೇಳಿ, " ಪುತ್ರಪ್ರಾಪ್ತಿರಸ್ತು ಐಶ್ವರ್ಯಮಸ್ತು " ಎಂಬ ಆಶೀರ್ವಾದವಂ ದಯಪಾಲಿಸಿತ್ತು, ಭಕ್ತವತ್ಸಲನೆಂಬ ಬಿರುದಾಂಕಿತನಾದ " ಶ್ರೀಗುರುಮುರಿಗೇಶನೇ " ನಿನ್ನನ್ನು ಸಕಲ ವಿಧದಿಂದ ಕಾಯುವವನಿರುತ್ತಿರಲ್ಕೆ ವೆಸನ ಪಡಬೇಡೆಂದು ಅಭಯುವನ್ನಿತ್ತು, ಆಶೀರ್ವಾದವಂ ದಯಪಾಲಿಸಿ ಕಳುಹಿಸಿ ಕೊಟ್ಟರು. ಬಸಪ್ಪನಿಗೆ " ಸನ್ನಿಧಿಯ " ಅಪ್ಪಣೆಯ ಪ್ರಕಾರ ಪುತ್ರರತ್ನಪ್ರಾಪ್ತವಾಗಿ, ಐಶ್ವರ್ಯವು ಸಹ ದೊರೆದುದರಿಂದ, ಬಸಪ್ಪನು ಪುನಃ

ಮಠಕ್ಕೆ ಬಂದು ಬಿನ್ನಹ ಮನ್ನಮಾಡಿ, ಸಮಾರಂಭದ ಉತ್ಸಾಹದೊಂದಿಗೆ ತನ್ನ ಗ್ರಾಮಕ್ಕೆ ಕರೆದೊಯ್ದು, ಸರ್ವ ರಾಜ ಬಿರುದಾವಳಿಗಳಿಂದೆ ಉತ್ಸಾಹವನ್ನು ಮಾಡಿಸುತ್ತಾ ಹೊಳಲಕೇರಿಯಲ್ಲಿ ಪ್ರವೇಸಿಸುವಾಗ್ಗೆ, ಆ ಗ್ರಾಮದ ಎರಡು ಸಾವಿರ ವಿಪ್ರರು ಕೂಡಿ, ವ್ಯಾಸನತೋಳನ್ನು ಮೆರಿಸಕೂಡದು, ಅಡ್ಡಪಲ್ಲಕ್ಕಿಯನ್ನು ನಡೆಸಕೂಡದೆಂದು ಅಡ್ಡಿಯನ್ನೊಡ್ಡಲು, ಸ್ವಾಮಿಗಳದಂ ಕೇಳಿ ಸಂತಪ್ತರಾಗಿ, ' ಮೈಸೂರ ಮಹಾರಾಜರವರ ಸನದು ನಮಗಿರುತ್ತಿರಲು, ಈ ವಿಪ್ರರ ತಡೆಯನ್ನು ಯಾಕೆ ಗಣಿಸುವಿರೆಂದು " ಸಮಸ್ತ ಭಕ್ತರಿಗೆ ಪೇಳಲು, ಸಮಸ್ತರು ವಿಪ್ರರ ಅಡ್ಡಿಯನ್ನು ಗಣನೆಗೆ ತಾರದೆ, ಅಡ್ಡಪಲ್ಲಕ್ಕಿ ವ್ಯಾಸನತೋಳುಗಳಿಂದೆ ಉತ್ಸಾಹ ದೊಡನೆ ಬಸಪ್ಪನ ಮನೆಗೆ " ಮಹಾಸ್ವಾಮಿಗಳನ್ನು " ಕರದೊಯ್ದರು. ಅಷ್ಟರಲ್ಲಿ ಅಲ್ಲಿಯ ಬ್ರಾಹ್ಮಣ ಸುಭೇದಾರರ ಹೆಂಡತಿಯೂ, ಮಗನೂ ಕೂಡಾ ಹೊಟ್ಟೆಯಲ್ಲುರಿಬಿದ್ದು ಮಹ ಸಂಕಟದಿಂದೆ ಹೊರಳಾಡಲು, ಅಲ್ಲಿ ಸರ್ವ ಬ್ರಾಹ್ಮಣರೂ ನೆರೆದು ವೆಸನಾಕ್ರಾಂತರಾಗಿ ಕುಳಿತರು. ಸುಭೇದಾರರು ಸುಬುದ್ಧಿಯಿಂದ ಕೆಲವು ಬ್ರಾಹ್ಮಣರನ್ನು ತನ್ನೊಡನೆ ಕರೆದುಕೊಂಡು ಬಂದು, " ಮಹಾಸ್ವಾಮಿಗಳಿಗೆ " ನಮಸ್ಕರಿಸಿ, ತನ್ನ ಮನೆಯ ವಾರ್ತೆಯನ್ನು ಸ್ವಾಮಿಗಳಿಗರುಹಿ ನಮಸ್ಕರಿಸಲು, ಸ್ವಾಮಿಗಳವರಂ ಸನ್ಮಾನಿಸಿ ಕೂಡ್ರಿಸಿ, ಇನ್ನು ಮುಂದೆ ಈ ತರದ ದ್ರೋಹವನ್ನು ಮಾಡಕೂಡದೆಂದು ಅವರಿಗೆ ಬುದ್ಧಿಯಂ ಪೇಳಿ, ಆಶೀರ್ವಾದವಂ ಕೊಡಲು ಸುಭೇದಾರರ ಮಗನಿಗೂ, ಹೆಂಡತಿಗೂ ಗುಣವಾಗಿ ಮೇಲಕ್ಕೆದ್ದರು. ಅಮಲ್ದಾರರು ( ೫೦೦ ) ರೂಪಾಯಿ ಕಾಣಿಕೆಯನ್ನು " ಮಹಾಸನ್ನಿಧಿಗೆ " ಒಪ್ಪಿಸಲು ಬಂದು ಕೇಳಿಕೊಳ್ಳಲು, ತಾವು ತಮ್ಮಲ್ಲಿರುವ ವಿದ್ವಾಂಸರನ್ನು ಕೂಡಿಕೊಂಡು ಈ ಕಾಣಿಕೆಯನ್ನು ತೆಗೆದುಕೊಂಡು ಬಂದು, ದುರ್ಗದ ಬೃಹನ್ಮಠದಲ್ಲಿ ಸಲಿಸಬೇಕೆಂದಾಜ್ಞಾಪಿಸಿ ಕಳುಹಿಸಿದರು. " ಮಹಾಸ್ವಾಮಿಗಳು " ಸಕಲ ಶಿವಭಕ್ತರ ಕಾಣಿಕೆಯಂ ತೆಗೆದು ಕೊಂಡು, ಸರ್ವರಿಗೂ ಆಶೀರ್ವಾದವನ್ನು ದಯಪಾಲಿಸಿ, ತಮ್ಮ ಸಂಸ್ಥಾನದ ಆಜಬಾಬ ಸಹ ಸಕಲ ಬಿರುದಾವಳಿ ಪರಿವಾರದ ಉತ್ಸಾಹದಿಂದೆ ಬೃಹನ್ಮಠಕ್ಕೆ ಬಿಜಯಂಗೈಸಿದರು. ಕೆಲವು ದಿವಸಗಳಲ್ಲಿ ಹೊಳಲಕೇರಿಯ ಸುಭೇದಾರರು ಸ್ವಾಮಿಗಳಾಜ್ಞಾನುಸಾರ ದುರ್ಗದ ಮಠಕ್ಕೆ ಹೋಗದಿದ್ದರೆ ಪುತ್ತಾನ ಕಷ್ಟಸಂಭವಿಸುವದೋ? ಎಂಬ ಭಯದಿಂದೆ ಬ್ರಾಹ್ಮಣರಲ್ಲಿರುವ ಅಲ್ಲಿಯ ಕೆಲವು ವಿದ್ವಾಂಸರನ್ನು ಕೂಡಿಕೊಂಡು, ( ೫೦೦ ) ರೂಪಾಯಿ ಕಾಣಿಕೆಯನ್ನು ಸಹ ತೆಗೆದು ಕೊಂಡು, ದುರ್ಗದ ಬೃಹನ್ಮಠಕ್ಕೆ ಬಂದು ಕಾಣಿಕೆಯನ್ನೊಪ್ಪಿಸಲು, " ಶ್ರೀಗಳವರು ಕಾಣಿಕೆಯಂ ಸ್ವೀಕರಿಸಿ " ತಮ್ಮ ಸಂಸ್ಥಾನದ ಜಮಾ

ಮಿರ್ಚಿನ ಪುಸ್ತಕಕ್ಕೆ ಚಾರು ಮಾಡಿಸಿ, ಮರುದಿನ ಒಂದು ದೊಡ್ಡ ಸಭೆಯನ್ನು ನೆರಸಿ; ಬ್ರಾಹ್ಮಣ ಪಂಡಿತರಿಗೆ ತನಗೆ ಅಡ್ಡಪಲ್ಲಕ್ಕಿ- ಶ್ವೇತಛತ್ರ - ವ್ಯಾಸನತೋಳುಗಳೆಂಬ ಸಮಸ್ತ ಬಿರುದಾವಳಿಗಳಿರುವ ಮೈಸೂರ ಮಹಾರಾಜರವರ ಸನದುಗಳನ್ನು ತೋರಿಸಿ; ಇದಕ್ಕೆ ಅಡ್ಡಿ ಮಾಡಿದವರಿಗೆ ಯೋಗ್ಯ ಶಾಸನ ವಾಗುವದೆಂಬ ಡಿಸ್ಟ್ರಿಕ್ಟ ಜಡ್ಜಿಯು ಹುಕ್ಕುಂ ತೋರಿಸಿದರು. ಶಾಸ್ತ್ರ ಮುಖದಿಂದೆ ಆ ರಾಜವೈಭವಗಳಿಗೆ ನಾವು ತಕ್ಕವರಿರುತ್ತೇವೆಂಬುದನ್ನು ಸಹ ಸಿದ್ಧಪಡಿಸಿ, ಆ ವಿದ್ವಾಂಸರನ್ನು ಸಮ್ಮತಿ ಗೊಳಿಸಿದರು. ಆನಂತರ ಅವರಿಗಪ್ಪಣೆಯಂ ಕೊಟ್ಟು ಕಳುಹಿಸಿ, ಬೃಹನ್ಮಠದಲ್ಲಿ ಶಿವಯೋಗಾನಂದ ವೈಭವಶಾಲಿಗಳಾಗಿರುತ್ತಿರಲಿಕ್ಕೆ ಮಹಾಸ್ವಾಮಿಗಳು ದೇಶಮಧ್ಯದ ಎಲ್ಲಾ ಹಿರಿಗುರು ಚರಮೂರ್ತಿಗಳು ಭಕ್ತರು ಸಹ ಪುರಾಣ ಶ್ರವಣಕ್ಕೆ ಬರಬೇಕೆಂದು ನಿರೂಪಗಳನ್ನು ಒಂದು ತಿಂಗಳ ಮುಂಚಿತವೇ ಸಾದರ ಮಾಡಿಸಿದ ಪ್ರಕಾರ ( ೮ - ೧೦ ) ಸಾವಿರ ಭಕ್ತ ಮಹೇಶ್ವರರು ಬೃಹನ್ಮಠದಲ್ಲಿ ಕೂಡಿದರು ಅಗ್ಗ ಮಠದಲ್ಲಿ ದಿನಂಪ್ರತಿ ಪುರಾಣ ಶ್ರವಣವೂ, ಜಂಗಮಾರಾಧನೆಯೂ, ನಿಯಮದಂತೆ ನಡೆಯುತ್ತಿರುವಲ್ಲಿ ಇನ್ನು ಮೇಲೆ ನಾವು ಸಾಂಬಲೋಕಕ್ಕೆ ಬಿಜಯಂಗೈಸುವೆವು. ಆದ್ದರಿಂದ ಮೊದಲೇ ತಯಾರು ಮಾಡಿಸಿರುವ ಮಳಲು ತುಂಬಿದ ಗೋಮುಖ ಸಮಾಧಿಯನ್ನು ತೆಗಿಸಿ; ತಯಾರ ಇಡಿಸಬೇಕೆಂತಲೂ, ತಾವು ತಿಳಿಸಿದ ಪ್ರಕಾರ ಪ್ರಣಮಂಗಳನ್ನಲ್ಲಲ್ಲಿಗೆ ಸಂಬಂಧಿಸಬೇಕೆಂತಲೂ, ಕೂಡಿದ ಸರ್ವ ಭಕ್ತ ಮಾಹೇಶ್ವರರಿಗೆ ಅಪ್ಪಣೆ ಮಾಡಲು ಸರ್ವರು ದುಃಖಿತರಾಗಿ, ವೆಸನದಿಂದೆ ಇನ್ನು ಕೆಲವು ದಿನ ತಾವು ಸಾಂಬಲೋಕಕ್ಕೆ ದಯಮಾಡಿಸಲಾಗದೆಂದು ಪ್ರಾರ್ಥಿಸಲು, "ಮಹಾಸ್ವಾಮಿಗಳು" ಅವರಂ ಕುರಿತು—ನೀವುಗಳು ವೆಸನಪಡಲಾಗದು ದಯಾಸಮುದ್ರನಾದ "ಶ್ರೀಮುರಿಗೇಶನ ಕೃಪೆಯು" ನಿಮ್ಮೆಲ್ಲರಮೇಲೆ ಉಂಟು. ನಾವಿನ್ನೆಷ್ಟು ದಿವಸಗಳವರೆಗೆ ಭೂಲೋಕದಲ್ಲಿರಬೇಕು?" ಎಂದಾಡಲು ಸಮಸ್ತ ಮಂಡಳಿಯು ಆಲೋಚಿಸಿಕೊಂಡು ಬಹಳ ದಿವಸಗಳವರೆಗೆ ಇರಬೇಕೆಂದು ಹೇಳುವದು ಸ್ವಾಮಿಗಳ ಸಮ್ಮತಿಗೆ ವಿರುದ್ಧವು ಎಂದು ಮಾತನಾಡಿಕೊಂಡು, ಸ್ವಾಮಿಗಳ ಸನ್ನಿಧಿಗೆ ಬಂದು, ಇಪ್ಪತ್ತೊಂದು ದಿವಸಗಳವರೆಗೆ ನಮ್ಮೆಲ್ಲರಿಗೆ ದರ್ಶನಾಶೀರ್ವಾದಂಗಳಂ ಕೊಡುತ್ತಾ ನಮ್ಮನ್ನುದ್ಧರಿಸಿ, ಅನಂತರ ಶಿವಲೋಕಕ್ಕೆ ಗಮಿಸುವದೆಂದು ಬೇಡಿಕೊಳ್ಳಲು, ಮಹಾಸ್ವಾಮಿಗಳು ಅಷ್ಟುದಿವಸಗಳವರೆಗೆ ಇರಲಿಕ್ಕಾಗುವದಿಲ್ಲ, ಶೀಘ್ರವೇ ಬರಬೇಕೆಂದು ಪ್ರಮಥರ ಅಪ್ಪಣೆಯಾಗಿದೆ ಎಂದು ಪೇಳಲು, ಅದಕ್ಕೆ ಸರ್ವರೂ ಭಕ್ತಾಧೀನನೆಂಬ ಬಿರುದಂ ಮೆರಿಸಲು, ಇನ್ನಿಪ್ಪತ್ತೊಂದು ದಿವಸಗಳ ವರೆಗೆ ನಿಮ್ಮಿಚ್ಛಾನುಸಾರ ಇ

ರಬೇಕೆಂದು ಬಹು ವಿಧವಾಗಿ ಪ್ರಾರ್ಥಿಸಲದಕ್ಕೆ " ಮಹಾಸ್ವಾಮಿಗಳು " ನಿಮ್ಮಾಜ್ಞಾನುಸಾರ ( ೨೧ ) ದಿವಸಗಳಲ್ಲಿ ನಾಂಬಲೋಕಕ್ಕೆ ತೆರಳುವೆವೆಂದು ಅಪ್ಪಣೆಯನ್ನಿತ್ತರು. ಅನಂತರ ( ೨೦ ದಿವಸಗಳಾಗಿ ( ೨೧ ) ನೆಯ ದಿವಸವು ನಾಳೆ ಸೋಮವಾರ ವಿರುವ ಕಾರಣ ಪ್ರಮಥರ ಅಪ್ಪಣೆಯುನ್ನಿರಾಕರಿಸಲಾಗದು ನಾವು ಮೊದಲು ಹೇಳಿದ ಪ್ರಕಾರ ಪ್ರಣಮಂಗಳ ಸಂಬಂಧವನ್ನು ತೀವ್ರವಾಗಿ ಮಾಡಿಸುವವೆಂದಾಜ್ಞೆಯಿತ್ತೀಯಲು, ಮಠದಲ್ಲಿ ತಯಾರಾಗಿರುವ ಎರಡು ಸಮಾಧಿಗಳಿರುವವು; ಅದರಲ್ಲಿ ತಮ್ಮದ್ಯಾವದೆಂದು ಸ್ವಾಮಿಗಳನ್ನು ಕೇಳಲು, ಎಡಭಾಗದಲ್ಲಿರುವ ಸಮಾಧಿಯೇ ನಮ್ಮದು; ಬಲಪಾರ್ಶ್ವದಲ್ಲಿರುವ ಸಮಾಧಿಗೆ ಮುಂದೆ ಬರುವವರಿದ್ದಾರೆಂದು ತಿಳಿಸಲು, ಸಮಸ್ತ ಭಕ್ತ ಮಾಹೇಶ್ವರರಲ್ಲಿ ಹಾವೇರಿ ಮುರಿಗೆಪ್ಪ ಶೆಟ್ಟರು ಮೇಲಕ್ಕೆದ್ದು ಕಯ್ಯ ಮುಗಿದುಕೊಂಡು, ತಮ್ಮ ಬದಲು ಈ ಸಿಂಹಾಸನಕ್ಕೆ ಗುರುಗಳನ್ನ ನೇಮಿಸಿಕೊಟ್ಟು, ತಾವು ಶಿವಲೋಕವಂ ಕುರಿತು ಗಮಿಸಬೇಕೆಂದು, ಬಹು ವಿಧವಾಗಿ ಬೇಡಿಕೊಳ್ಳಲು, ಮಹಾಸ್ವಾಮಿಗಳು ಈ ದಿವಸ ಭಾನುವಾರವು ನಾಳೆ ಸೋಮವಾರವಿರುವದರಿಂದ ನಾಳಿನದಿನ ಮಧ್ಯಾಹ್ನದಲ್ಲಿ ನಿಮಗೆ ಗುರುಗಳಂ ನೇಮಿಸಿ ಕೊಟ್ಟು, ಸಾಯಂಕಾಲಕ್ಕೆ ಶಿವಲೋಕಕ್ಕೆ ಗಮಿಸುವೆವೆಂದು ಪೇಳಿ, ಪಟ್ಟದ ಸಮಾರಂಭದ ತಯಾರಿಯು ತೀವ್ರವಾಗಲೆಂದು ಪೇಳಿದರು. ಆ ಪ್ರಕಾರ ಸಕಲ ಸನ್ನಾಹವನ್ನು ಸಿದ್ಧಪಡಿಸಿ, ಸೋಮವಾರ ಪ್ರಾತಃಕಾಲದಲ್ಲಿ ಸ್ವಾಮಿಗಳಿಗೆ ಸಕಲ ಸನ್ನಾಹವು ತಯಾರಾಗಿಧೆ ಎಂದು ಅರಿಕೆ ಮಾಡಿಕೊಳ್ಳಲು ಸಮಸ್ತ ಹರಗುರು ಚರಮೂರ್ತಿಗಳು ಸ್ನಾನಾದಿ ಶಿವಪೂಜೆಯಂ ತೀರಿಸಿಕೊಂಡು, ಮಡಿಯಿಂದ ಬರಬೇಕೆಂದಾಜ್ಞಾಪಿಸಿದಂತೆ ಸ್ನಾನ ಶಿವಪೂಜೆಯಂ ತೀರಿಸಿಕೊಂಡು, ಸಕಲರೂ ಕರ್ತೃಗದ್ದುಗೆಯ ಬಳಿಗೈದಿದರು. ಆಗ್ಗೆ ಅಲ್ಲಿ ಕೂಡಿದ ಚರಮೂರ್ತಿಗಳು ತಮ್ಮತಮ್ಮ ಮನದಲ್ಲಿ ನನಗಾಗಬೇಕು ತನಗಾಗಬೇಕೆಂಬದಾಗಿ ಆಲೋಚಿಸುತ್ತಿರುವಷ್ಟರಲ್ಲಿ ಸರ್ವ ಚರಮೂರ್ತಿಗಳು ಬಂದಿರುವರೋ! ಎಂದು ವಿಚಾರಿಸಲು, ಸಣ್ಣಪಾದದ ಚನ್ನವೀರ ದೇವರೆಂಬ ಚರಮೂರ್ತಿಗಳು ಮಾತ್ರ ಜಾಡ್ಯದಿಂದ ಖಾಸಾದ ಆ ಮಠದಲ್ಲಿಯೇ ಪವಡಿಸಿರುವರೆಂದು ಬಿನ್ನೈಸಲು ಅವರನ್ನ ಕರತರವುದಕ್ಕೆ ಅಪ್ಪಣೆಯಾಯಿತು. ಆಗೋರ್ವ ಚರಮೂರ್ತಿಗಳು ಖಾಸಾದ ಮಠದಲ್ಲಿ ಪೋಗಿ, ಮಹಾಸನ್ನಿಧಿಯು ಅಪ್ಪಣೆಯಾಗಿಧೆ; ಬರಬೇಕೆಂದು ಸಣ್ಣಪಾದದ ಚರಮೂರ್ತಿಗಳಿಗೆ ತಿಳಿಸಲು, ನನ್ನ ಮಯ್ಯಲ್ಲಿ ಜಾಡ್ಯವಿರುವಕಾರಣ ನಾನು ಬರಲಾರೆನೆಂದು ವಿನಯದಿಂದೆ ಹೇಳಿದನೆಂದು ಸನ್ನಿಧಿಗೆ ಅರಿಕೆಮಾಡುವದಾಗಿ ಪೇಳಲು, ಆ ಚರಮೂರ್ತಿಗಳು ಈ

ವಿವರವನ್ನು ಮಹಾಸನ್ನಿಧಿಗೆ ಅರಿಕೆಮಾಡಿಕೊಂಡರು. ಅದಕ್ಕೆ ಮಹಾಸನ್ನಿಧಿಯು ಗುರುವಾಜ್ಞೆಗೆ ಸರಿಯಾಗಿ ಬರುವನೋ! ಬಾಧೆಯಲ್ಲಿ ಬಿದ್ದೊರಳುವನೋ! ಇನ್ನೊಮ್ಮೆ ಕೇಳಿಬನ್ನಿರೆನಲು, ಪುನಃ ಚರಮೂರ್ತಿಗಳು ಪೋಗಿ ಸ್ವಾಮಿಗಳಾಡಿದ ವಾಕ್ಯವನ್ನು ತಿಳುಹಲು, ನಡಗುತ್ತಾ ಭೀತಿಯಿಂದೆದ್ದು, ಮಹಾಸನ್ನಿಧಿಯ ದರ್ಶನಕ್ಕೆ ಬಂದು ನಮಸ್ಕರಿಸಲು, ಮಹಾಸ್ವಾಮಿಗಳು ಸಂಪೂರ್ಣ ಕೃಪಾದೃಷ್ಟಿಯಿಂದವರನ್ನು ನಿರೀಕ್ಷಿಸಿದ ಮಾತ್ರದಲ್ಲಿಯೇ ಅವರ ಜಾಡ್ಯವು ಪರಿಹಾರವಾಗಿ, ಏನಪ್ಪಣೆಯೆಂದು ಕೈಜೋಡಿಸಿಕೊಂಡು ನಿಲ್ಲಲು, ಸರ್ವ ಪರಗುರು ಭಕ್ತರಿಗೆ ಸ್ವಾಮಿಗಳು ಅಂದದ್ದು — ನಾವು ಯಾವವೇಳೆಗೆ ವಾದ್ಯಗಳು ಮೊಳಗಲೆಂದಪ್ಪಣೆಯನ್ನೀಯುವೆವೋ ಆ ವೇಳೆಗೆ ವಾದ್ಯಗಳ ಘೋಷ ಉಂಟಾಗಲೆಂದು ಅಜ್ಞೆಯನ್ನಿತ್ತು, ಸರ್ವರೂ ಪಟ್ಟಗಟ್ಟುವ ಸದರಿನ ಬಳಿಯಲ್ಲಿ ಸನ್ನದ್ಧರಾಗಿರಬೇಕೆಂದು ನಿರೂಪಿಸಿ, ಆ ಸಣ್ಣವಾದ ಚನ್ನವೀರದೇವರನ್ನು ಕರಕೊಂಡು ಶ್ರೀಕರ್ತರಗದ್ದುಗೆಯೊಳಗೆ ಪೊಕ್ಕು, ಕವಾಟಂಗಳಂ ಬಂಧಿಸಿಕೊಂಡರು. ಒಳಗೆ ಪ್ರವೇಶವಾದ ಒಂದು ತಾಸಿನಮೇಲೆ ಕವಾಟಂಗಳಂ ತೆಗಿಸಿ, ವಾದ್ಯ ನಾದಕ್ಕಪ್ಪಣೆಯಂ ಕೊಡಲು, ಸರ್ವ ವಾದ್ಯಗಳ ಧ್ವನಿಯಂಗೈಸಲು ಸರ್ವ ಪರಗುರು ಚರಮೂರ್ತಿಗಳು, ಮುಖ್ಯರಾದ ಭಕ್ತರು ಹೋಗಿ ನೋಡುತ್ತಿರಲು, ಸದರಿ ಚನ್ನವೀರಸ್ವಾಮಿಗಳ ಉಡಿಯಲ್ಲಿ ಶಿಖಾ - ಶೈಲಗಳನ್ನಿಟ್ಟು, ಅವರ ತೊಡಿಯಮೇಲೆ ಮಸ್ತಕವನ್ನಿಟ್ಟು, ಶೈಯನಿಸಿ, ಚನ್ನವೀರಸ್ವಾಮಿಗಳಿಗ ಬೋಧೆಯಂ ಕೊಡುವದನ್ನು ಕಂಡರು. ಕೂಡಲೇ ಸರ್ವರು ಚನ್ನವೀರಸ್ವಾಮಿಗಳಿಗೆ ಸಾಷ್ಟಾಂಗವೆರಗಿ ಅವರನ್ನು ಕರಕೊಂಡು ಬಂದು, ಮಠದೊಳಗಣ ರಾಜಾಂಗಣದ ವಿಸ್ತಾರವೂ ಗಿರ್ದ ದಿವ್ಯ ಸಿಲಾಮಯ ಮಂದಿರದಲ್ಲಿರುವ ಸದರಿನಮೇಲೆ ಕುಳ್ಳಿರಿಸಿ, ಜಯಘೋಷವನ್ನು ಮಾಡಿಸಿ, ಸರ್ವರಿಂದ ಕಾಯಿ ಕರ್ಪೂರ ಕಾಣಿಕೆಯನ್ನಿಡಿಸಿ, ಸಾಷ್ಟಾಂಗ ನಮಸ್ಕಾರವಂ ಮಾಡಿಸಿ, ಇವರೇ ಜಗದ್ಗುರುಗಳೆಂದು ಪಾಠಕರಿಂ ಬಿರುದಂ ಪೊಗಳಿಸಲು ಭೇರಿ - ಢಕ್ಕಾ - ಡಮರುಗಾದಿ ವಾದ್ಯಂಗಳು ಮೊಳಗಲಾಗಿ "ಶ್ರೀಗುರುಶಾಂತಸ್ವಾಮಿಗಳು ಕರ್ತರ ಗದ್ದುಗೆಗೆ ಹೋಗಿ ಕುಳಿತುಕೊಂಡರು." ಆಮೇಲೆ ಸರ್ವ ಸಮೂಹದಿಂದೆಪ್ಪತ್ತೆರಡು ಬಿರುದಾವಳಿ ಸಹವಾಗಿ, ವಿಜಯೋತ್ಸವದಿಂದೆ ಅಡ್ಡಪಲ್ಲಕ್ಕಿಯಲ್ಲಿ ಹೊಸದಾಗಿ ಪಟ್ಟಗಟ್ಟಿದ ಸ್ವಾಮಿಗಳನ್ನು ಮೆರಿಸಿ ಬರುವಷ್ಟರಲ್ಲಿ, ರಾತ್ರಿ (೮ - ೯) ತಾಸುಗಳಾದ್ದರಿಂದ ಶ್ರೀಗುರುಶಾಂತಸ್ವಾಮಿಗಳ ಬಳಿಗೈತಂದು ಉತ್ಸಾಹದ ಮೆರವಣಿಗೆಯು ದಶೆಯಿಂದ ಇಷ್ಟತಡವಾಯಿತು. ಕ್ಷಮಿಸಬೇಕೆಂದು ಬೇಡಿಕೊಂಡು, ಇವಷ್ಟು ತಾವು ದಯಮಾಡಿಸದೆ ಸಾಳೇವಿನ ದಯಮಾಡಿ

ಸಬೇಕೆಂದೆಲ್ಲರೂ ಕೇಳಿ ಕೊಳ್ಳಲು. ಶ್ರೀಗುರುಶಾಂತಸ್ವಾಮಿಗಳದಕ್ಕೆ ಪ್ರಮಥರು ಕಾದುಕೊಂಡಿರುತ್ತಾರೆ. ಆದರೂ ನಿಮ್ಮಭೀಷ್ಟದಂತೆ ನಾಳೆ ಬುಧವಾರದಿನ ಕಾಯಥ ರಸಿ ಸಮಾಧಿಯುಂ ಪೋಗುವೆವೆಂದು, ಪೇಳಲದಕ್ಕೆ ಭಕ್ತ ಮಾಹೇಶ್ವರರು ಈಗಿನ ಸ ರಕಾರದ ತೊಂದರೆ ಬಂದೀತು ಮೊದಲೇ ಈ ಮಾತನ್ನು ಸರಕಾರಕ್ಕೆ ತಿಳಿಸಬೇಕೇ ಇಲ್ಲೇ ಎಂಬದಾಗಿ ಮಹಾಸನ್ನಿಧಿಯುಂ ಕೇಳಲು, ನೀವು ಯಾವಮಾತಿಗೂ ಭಯಂ ಗೊಳ್ಳಬೇಡಿರಿ, ಎಂದು ಪೇಳಿ, ಬುಧವಾರ ಸಾಯಂಕಾಲದಲ್ಲಿ ಮೂರ್ತಂಗೊಂಡ ಸ್ಥಳದಲ್ಲಿಯೇ ನಿರ್ವಯಲಾದರು. ಇವರ ತೋರಗದ್ದುಗೆಯು ಚಿನ್ಮೂಲಾದ್ರಿ ಬೃಹ ನ್ಮಠದಲ್ಲುಂಟು.

---

॥ ಶ್ರೀಗುರುಚನ್ನವೀರಸ್ವಾಮಿನೇನಮಃ ॥

# ೨೦ನೇಪಟ್ಟ

ಶಾ, ವಿ, ವೃ.

ಶ್ರೀಮಚ್ಚೆನ್ನಸುವೀರನೆಂಬಪೆಸರಂದಾಳ್ದಿರ್ದ ಯೋಗೀಶ್ವರಂ ।
ಆ ಪೌರಾಣಿಕನು ರಾಗದಿಂದೆ ಪದವಂದಾಳುತ್ತೆ ಸಂತೋಷದಿಂ ॥
ಶ್ರೀಮತ್ಸನ್ನುತ ಸದ್ಗುಣಾಭರಣನಾಗಿಳ್ದೇಶದೇಶಂಗಳೋ ।
ಳ್ಸ್ವಾಮಿ ಶ್ರೀಜಗದೀಶನೆಂಬಬಿರುದಿಂತಾನೊಪ್ಪುತಿರ್ದಂ ಸದಾ ॥ ೧ ॥

ಈ ಇಪ್ಪತ್ತನೆಯ ಶೂನ್ಯಸಿಂಹಾಸನದ ಪಟ್ಟವು ಸಣ್ಣಪಾದ ಶ್ರೀಚನ್ನವೀರ ಸ್ವಾಮಿಗಳಿಗೆ ಇವರ ಪ್ರಾಕ್ಪಟ್ಟದ ಗುರುಗಳಾದ ಸಾವಳಿಗೀ ಗುರುಶಾಂತಸ್ವಾಮಿ ಗಳಿಂದ ನೇಮಿಸಲ್ಪಟ್ಟಿತು. ಇವರು ಸದಾ ಗುರುಧ್ಯಾನಯುಕ್ತರಾಗಿ, ಬೃಹನ್ಮಠ ದಲ್ಲಿ ಸಾರ್ವದಾ ಶ್ರೀಶಿವಯೋಗಾನಂದ ವೈಭವಯುಕ್ತರಾಗಿ, ಸುಖದಿಂದಿರ್ದ ಕೆ ಲವು ದಿವಸಗಳಮೇಲೆ, ಓರ್ವ ಅಮಲ್ದಾರನು ನಾಲ್ಕೆಂಟುಜನ ಶಿಪಾಯಿಗಳನ್ನೊಡ ಗೂಡಿಕೊಂಡು, ಚಿನ್ಮೂಲಾದ್ರಿ ಬೃಹನ್ಮಠಕ್ಕೆ ಬಂದು, ಸಂಸ್ಥಾನದ ಕಚೇರಿಯಲ್ಲಿ ಕೂತುಕೊಂಡು, ಲಿಂಗೈಕ್ಯರಾದ ಸ್ವಾಮಿಗಳು ಯಾರು? ಈಗ ಪಟ್ಟವಾಗಿರುವ ಸ್ವಾ ಮಿಗಳುಯಾರು? ಈ ಮಠದಲ್ಲಿರುವ ಸಮಸ್ತ ಜಿಂದಿಗೆ ಎಷ್ಟು? ಅದನ್ನು ಝಡತಿ ಯಿಂದೆ ಜವಾಬನ್ನು ಕೊಡಬೇಕೆಂದು, ಕೇಳುತ್ತಿರುವ ಸಂಗತಿಯನ್ನು ಅರ್ಚಕರಿಗಾಗಿ

ಕುಳಿತಿರುವ ಮಹಾಸ್ವಾಮಿಗಳಿಗೆ ತಿಳಿಸಲು, ಆವರು ಅತಿ ಕೋಮಲವಾದ ಸ್ವಭಾವಮುಳ್ಳವರಾದ್ದರಿಂದಭಯಾನ್ವಿತರಾಗಿ, ಅರ್ಪಿತವಂಗೈಯುವದನ್ನು ಬಿದು ಕೊಡ್ರಲು, ಹೆದರಬೇಡ ಅರ್ಪಿತವನ್ನು ಮಾಡೆಂದು ಶಬ್ದಮುಂಟಾಗಲು ಅದಂ ಕೇಳ್ದು; ಅಲ್ಲಿ ಯಾರೂ ಇಲ್ಲದ್ದು ನೋಡಿ, ಆಶ್ಚರ್ಯಗೊಂಬಟ್ಟು, ಆಕಾಶವಾಣಿಯುಂತೆ "ಶ್ರೀಗುರುವೇ" ಪೇಳಿದನೆಂದು ಸಂತೋಷಚಿತ್ತರಾಗಿ, ಅರ್ಪಿತವನ್ನು ಮಾಡುತ್ತಿರುವಾಗ್ಗೆ ಜಡಿ ಸಿದ್ಧರಾಮಪ್ಪನವರು ಸನ್ನಿಧಿಯ ಹತ್ತರ ಬಂದು, ತಾವು ಯಾವಮಾತಿಗೂ ಭಯ ಪಡುವದು ಸರಿಯಲ್ಲ; ಏನುಬಂದರೂ ನಾನು ನಿರ್ವಹಿಸಿಕೋಳ್ಳುವೆನೆಂದು ಹೇಳಿ, ಸಾಷ್ಟಾಂಗವನ್ನೆರಗಿ ಬರುವಾಗ್ಗೆ ಅತ್ಯುಗ್ರವಾದ ಕೋಪವು ಉತ್ಪನ್ನವಾಗಿ, ಸಂಸ್ಥಾನದ ಕಚೇರಿಗೆ ಬಂದು, ಅಮಲ್ದಾರರೊಡನೆ ಇದ್ದ ಶಿಪಾಯಿಗಳು ಹತ್ಯಾರಯುಕ್ತರಾಗಿರುವದಂ ಕಂಡು, ಸಂಸ್ಥಾನದ ಶಿಪಾಯರಿಗೆ ಆ ಅಮಲ್ದಾರರ ಶಿಪಾಯರ ಹತ್ಯಾರುಗಳನ್ನು ಕಸಕೊಂಡು, ಅವರನ್ನು ಪಾಹರೆದಲ್ಲಿಡತಕ್ಕದ್ದೆಂದು ಹೇಳಲು, ಆ ಮೇರೆಗೆ ಸಂಸ್ಥಾನದ ಶಿಪಾಯಿಗಳು ಅವರ ಹತ್ಯಾರುಗಳನ್ನು ಕಸಕೊಂಡು, ಆ ಜನರನ್ನೆಲ್ಲಾ ಪಹರೆದಲ್ಲಿಟ್ಟರು. ಆಗ್ಗೆ ಅಮಲ್ದಾರನು ನಮ್ಮ ಶಿಪಾಯಿಗಳನ್ನು ಏಕೆ ಪಹರೆದಲ್ಲಿಡುವದೆಂದು ಕೇಳಲು, ಅದಕ್ಕೆ ಜಡಿ ಸಿದ್ಧರಾಮಪ್ಪನವರು ಅಂದದ್ದು — ಅರಮನೆಯಂತೆ ಗುರುಮನೆಯು ನೇಮ ವುಂಟು; ಮಠದವರ ಸಮ್ಮತಿ ಇಲ್ಲದೆ ವಳಗೆ ಬಂದ ಅಪರಾಧಕ್ಕೆ ಕಾಣಿಕೆಯಂ ಕೊಡದಪಿನಹ ಬಿಡುವದಿಲ್ಲೆಂದಾಡಿ, ಈ ಸಂಸ್ಥಾನದ ವಿಚಾರವನ್ನು ತೆಗೆದುಕೊಳ್ಳುವ ಯೋಗ್ಯತೆಯು ಮೊದಲೇ ನಿನಗಿರುವದಿಲ್ಲ; ಸ್ವಾಮಿಗಳ ಅಪ್ಪಣೆಯಿಲ್ಲದೆ ಮಠದೊಳಗೆ ನೀನು ಬಂದಿರುವದಕ್ಕೆ ನಿನ್ನನ್ನು ಸಹವಾಗಿ ಪಹರೆದಲ್ಲಿ ಕೊಡತಕ್ಕದ್ದಿತ್ತು, ನೀನು ಅರಿಯದವನಂತೆ ಕಾಣುವದರಿಂದ ಈ ಸಾರೆ ಮಾಫಮಾಡಿ ಬಿಡುತ್ತೇವೆ. ಈ ನಮ್ಮ ಜಾಗೆಯನ್ನು ಬಿಟ್ಟು, ಎದ್ದು ಹೊರಗೆ ಹೋಗಿ ಚಾವಡಿಯಲ್ಲಿ ಕೂತುಕೊಂಡು, ನಿನ್ನ ಇಲಾಜ ಏನಿದ್ದರೂ ನಡೆಸಬಹುದೆಂದು ಅಡಲು, ಏನೊಂದು ಮಾತನ್ನಾಡದೆ ಹೊರಗೆ ಹೋಗಿ, ಈ ಸಂಗತಿಯ ಬಗ್ಗೆ ಬೃಹನ್ಮಠದಲ್ಲೀಗಿರುವ ಸ್ವಾಮಿಗಳ್ಯಾರು? ಮತ್ತು ಲಿಂಗೈಕ್ಯರಾದಸ್ವಾಮಿಗಳ್ಯಾರು? ಮಠದ ಜಿಂದಿಗೆಯೇನಿದ್ದದ್ದು ಝಡತಿ ತೋರಿಸ ಬೇಕೆಂದು ಕೇಳಲಿಕ್ಕೆ, ಬೃಹನ್ಮಠಕ್ಕೆ ನಾಲ್ಕೆಂಟು ಶಿಪಾಯರೊಡನೆ ನಾನು ಹೋಗಿ ವಿಚಾರಿಸಿದರೆ, ನಮ್ಮ ಶಿಪಾಯರನ್ನು ಹೊರಗೆ ಬಿಡದೆ ಪಹರೇದಲ್ಲಿಟ್ಟು, ಪ್ರತಿಬಂಧಿಸಿರುವರೆಂದು ರಿಪೋರ್ಟಿನಿಂದ ತಿಳಿಸಿ, ಮಠದಿಂದ ಯಾವಜಿಂದಿಗಿಯೂ ಹೊರಗೆ ಬಾರದಂತೆ ಕಾವಲಿಟ್ಟು, ತನ್ನ ಸ್ಥಳಕ್ಕೆ ಪೋದನು. ನಂತರ ಮೇಲಧಿಕಾರಿಗಳಾದ ಬೃಹನ್ಮಠದ ಕಾರಭಾರಿಯು ನಿಮಗೆ

ಕೊಟ್ಟ ಉತ್ತರವೇ ಸರಿಯಾಗಿರುವದು. ಮಠದ ಜಿಂವಿಗಿಯು ಝಡತಿ ದಶೆಯಿಂದ ನಿಮಗೆ ಯಾರು ಹುಕುಂ ಕೊಟ್ಟಿದ್ದರ? ನೀವು ಅಕ್ರಮವಾದ ಕೆಲಸ ನಡೆಸಿದ್ದರಿಂದ ನಿಮ್ಮನ್ನೂ,ನಿಮ್ಮ ಕೂಡ ಮಠಕ್ಕೆ ಹೋದ ಶಿಪಾಯರನ್ನೂ ಸಹ ಕೆಲಸದಿಂದ ದೂರ ಮಾಡಿರುತ್ತೇವೆ. ಮಠದವರಿಗೆ ಕಾಣಿಕೆಕೊಟ್ಟು,ಶಿಪಾಯರನ್ನು ಹಿಡಿಸಿಕೊಳ್ಳಬೇಕೆಂತಲೂ,ಮುಂದೆ ಏನಾದರೂ ತಂಟೆವಗೈರೆ ನಡೆಸಿದರೆ,ಯೋಗ್ಯ ಶಿಕ್ಷೆಗೆ ಪಾತ್ರರಾಗುರುವಿರೆಂತಲೂ, ಬೆಂಗಳೂರ ಜಡ್‌ಜಿಗಳಿಂದ ಹುಕುಂ ಬಂದದ್ದಾಯಿತು. ಪಹರೆದಲ್ಲಿರುವ ಶಿಪಾಯರು ಅಪರಾಧಕಾಣಿಕೆ ಕೊಟ್ಟು, ತಮ್ಮ ಸಾವಕಾನು ತೆಗೆದುಕೊಂಡು ಬಿಡುಗಡೆ ಹೊಂದಿದರು. ಈ ವ್ಯಾಜ್ಯವು ಈ ಸ್ವಾಮಿಗಳಿಗೆ ಪಟ್ಟವಾದ ( ೫ ) ನೇ ದಿನದಲ್ಲುಂಟಾಯಿತು. ಈ ವ್ಯಾಜ್ಯದ ಸಹಾಯಕ್ಕೆ ದಾವಣಗೇರಿ - ಹರಿಹರ - ರಾಣೇಬೆನ್ನೂರ - ಹಾವೇರಿ - ಮುಂತಾದ.ಸದ್ಭಕ್ತರು ಬೆಂಗಳೂರ ವರೆಗೆ ಹೋಗಿದ್ದರು. ಕೆಲವು ದಿವಸಗಳನಂತರ, ಶಿರ್ಸಿ ಬಣ್ಣದಮಠದ ಮುರಿಗೆಪ್ಪ ಚರಮೂರ್ತಿಗಳು ಬೃಹನ್ಮಠದ "ಶ್ರೀಗಳವರಿಗೆ" ಅಂಕಿತರಾಗಿರದೆ, ಏನಿಕೆ ಕಾರಣದ ದಶೆಯಿಂದ ಒಂದು ಮಠಸಂಬಂಧವಾದ ವ್ಯಾಜ್ಯದಲ್ಲಿ ವಿರೋಧಭಾವದಿಂದಿದ್ದು, ಶಿರ್ಸಿ ಕೋರ್ಟಿನಿಂದ "ಶ್ರೀಗಳವರಿಗೆ" ಮೊದಲು ಸಮನಸು ಜಾಹಿರಮಾಡಿಸಿ, ಸಮನಿಸ ದಾಯಿಷೆ ಆದಮೇಲೆ ವಾರಂಟ ಮಾಡಿಸಿದನು. ಶಿರ್ಸಿ ಕೋರ್ಟಿನಿಂದ ವಾರಂಟು ತಲ್ಪಿದ ಕೂಡ್ಲೇ ಅದಂ ನೋಡಿ, ಶ್ರೀಮಹಾಸನ್ನಿಧಿಗೆ ಅತಿಶಯುವಾದ ಕೋಪವುಂಟಾಗಿ, "ಎಲಾ ಗುರುದ್ರೋಹಿ ನೀನು ಅಂತ್ಯಜರಪಾಲಾಗೆಂದು" ಉಗ್ರವಾದ ಶಾಪವನ್ನಿತ್ತು, ತಮ್ಮ ತರ್ಫಿನಿಂದ ಒಬ್ಬ ಚರಮೂರ್ತಿಗಳನ್ನು ಶಿರ್ಸಿ ಕೋರ್ಟಿಗೆ ಕಳಿಸಲಿಕ್ಕೆ ಮೊಖ್ತಿಯಾರ ಹುಕುಂ ತರಿಸಿಕೊಂಡು, ಮೊಖ್ತಿಯಾರ ಚರಮೂರ್ತಿಗಳನ್ನು ಶಿರ್ಸಿಕೋರ್ಟಿಗೆ ಕಳಿಸಲು, ಶಿರ್ಸಿ ಸಬ್ಬ ಜಡ್‌ಜಿಯುವರು "ಶ್ರೀಮಹಾಸ್ವಾಮಿಗಳಂತೆ" ತೀರ್ಮಾನಿಸಿ, ಬಣ್ಣದ ಮಠದ ಮುರಿಗೆಪ್ಪ ಚರಮೂರ್ತಿಗಳಮೇಲೆ ಅಬರೂ ಲುಕ್ಸಾನಿಯ ದಾವೇಯನ್ನು ಬೃಹನ್ಮಠದ ಸ್ವಾಮಿಗಳು ಮಾಡಬಹುದೆಂದು ತಮ್ಮ ಠರಾವಿನಲ್ಲಿ ಸಹ ಬರೆದಿಟ್ಟರು. ಈ ಜಜ್ಜಮೆಂಟ ಮಹಾಸನ್ನಿಧಿಯು ದಿವ್ಯಚಿತ್ತಕ್ಕೆ ವೇದ್ಯವಾಗಿ, ಆ ಗುರುದ್ರೋಹಿಯಾದ ಭ್ರಷ್ಟನಮೇಲೆ ದಾವೆತರುವದು ಬೇಡ; ಅವನ ಹೆಸರು ಸಹ ಬೇಡವೆಂದು, ಗುರುದ್ರೋಹಿಗೆ ಅಜನ್ಮ ಬಹಿಷ್ಕಾರವಂ ಸ್ಥಾಪಿಸುವದೇ ಯೋಗ್ಯವೆಂದು, ಬಹಿಷ್ಕಾರವನ್ನು ದೇಶದೇಶಾಂತರದಲ್ಲಿ ಸಾದರ ಗೊಳಿಸಿದರು. ಕೆಲವು ದಿವಸಗಳಮೇಲೆ ಸದರಿ ಮುರಿಗೆಪ್ಪನವರು ಒಂದು ಮರಕ್ಕೆ ಉರ್ಲು ಹಾಕಿಕೊಂಡು ಮೃತಪಟ್ಟಿರುವದನ್ನು ಸರಕಾರದವರು ನೋಡಿ, ಶನ್ನಿಂದ ರಾನೇ ಯಾವದೋ ಒಂ

ದು ಕಾರಣವಶೆಯಿಂದ ತನ್ನಷ್ಟಕ್ಕೆ ತಾನೇ ವ್ಯತವಾದ ಸಂಗತಿಯು ಕಂಡು ಬಂದ ದರಿಂದ, ಸನ್ನಿಧಿಯು ಶಾಪದಂತೆ ಚಾಂಡಾಲರಿಂದ ಮಣ್ಣುಪಾಲಾದನು. ಇತ್ತ ಸ್ವಾ ಡಾವಣಗೇರಿ ತಾಲೂಕು ಮಾಯೆಕೊಂಡ ಗ್ರಾಮದ ಕೆಂಚಲೇಗೌಡನು ಬೃಹನ್ಮ ಠಕ್ಕೆ ಬಂದು, ಸ್ವಾಮಿಗಳಿಗೆ ನಮಸ್ಕರಿಸಿ. ಸಕಲ ರಾಜವೈಭವದಿಂದ ನನ್ನ ಮನೆ ಯ ಬಿನ್ನಹವನ್ನು ತೀರಿಸಿ, ನನ್ನನ್ನುದ್ಧರಿಸಬೇಕೆಂದು ಬೇಡಿಕೊಳ್ಳಲು, ಆತನ ಬಿ ನ್ನಹಕೊಪ್ಪಿ, ಮಾಯೆಕೊಂಡಗ್ರಾಮಕ್ಕೆ ರಾಜವೈಭವ ಸಕಲ ಪರಿವಾರ ಬಿರುದಾ ವಳಿ ಸಹವಾಗಿ ಆಗಮಿಸಿ, ಆ ಭಕ್ತನ ಕಾಣಿಕೆ ಸೇವಾ ಸಲ್ಲಿಸಿಕೊಂಡು, ಆ ಊ ರ ಕಾಣಿಕೆಯನ್ನು ಸಹ ವಸೂಲ್ಮಾಡಿಕೊಂಡು, ತಮ್ಮ ಎಲ್ಲಾ ಲವಾಜಮೆಯನ್ನು ಬೃಹನ್ಮಠಕ್ಕೆ ರವಾನಿಸಿ, ಸ್ವಲ್ಪ ಪರಿವಾರದೊಂದಿಗೆ ಸಕಲ ಬಿರುದಾವಳಿಗಳಿಂದೆ ಮೇ ಣಾಸ್ವಾರಿಯಿಂದೆ ಗಮಿಸುವ ಮಾರ್ಗದಲ್ಲಿ ಡಾವಣಗೇರಿ - ಮಾಯೆಕೊಂಡದ ಕೆಲವು ವಿಪ್ರಜನರು ಅಂದಾಜು ( ೨೦೦೦ ) ರ ಮಟ್ಟಿಗೆ ಗುಂಪು ಸೇರಿ, ನೀವು ಅ ಡ್ಡಪಲ್ಲಕ್ಕಿ ವ್ಯಾಸನತೋಳುಗಳಿಂದೆ ಗಮಿಸ ಕೂಡದೆಂದು ಅಡ್ಡೀಮಾಡಲು, “ ಮ ಹಾಸ್ವಾಮಿಗಳು ” ಆ ವಿಪ್ರರಿಗೆ ಶಾಸ್ತ್ರಾಧಾರದಿಂದೆಷ್ಟು ಒಡಂಬಡಿಸಿದಾಗ್ಯೂ ಕೇಳ ದೆ ತಡಿಯಲಾಗಿ, ಸ್ವಾಮಿಗಳು ನಿರಂತರದಲ್ಲಿಯೂ, ತಮ್ಮ ಹತ್ತಿರಿರುವ ಎರ ಡು ಸುರಗಿಗಳನ್ನು ಎರಡೂ ಕೈಗಳಲ್ಲಿ ಧರಿಸಿಕೊಂಡು, “ ಜಯಜಗದ್ಗುರು ಮುರಿ ಗೇಶ ” ಎಂದು ಜಯನಾದವಂಗೈದು, ಪುಟನೆಗೆದು ಹಾರಿ ಖಡ್ಗಗಳನ್ನು ಭರಭರ ನೆ ತಿರುವುತ್ತಾ, ವಿಪ್ರರನ್ನು ಬೆನ್ನಟ್ಟಲು, ಆ ವಿಪ್ರರಿಗೆ ಸಾವಿರಗಟ್ಲೆಯ ಜಂಗಮ ಶಿವಯೋಗಿಗಳೆಲ್ಲರೂ, ಎರಡೂ ಹಸ್ತಗಳಲ್ಲೆರಡೆರಡು ಖಡ್ಗಗಳನ್ನು ಹಿಡಿದು, ಬೆನ್ನ ಟ್ಟುವಂತೆ ಕಾಣಲು, ಆ ವಿಪ್ರರ ಗುಂಪೆಲ್ಲಾ ಬೆದರಿ ಎಡಹುತ್ತಾ, ಮುಗ್ಗರಿಸುತ್ತಾ, ಬೀಳುತ್ತೇಳುತ್ತಾ ದಿಕ್ಕುಪಾಲಾಗಿ ಓಡಿಹೋಗಿ, ಊರುಗಳನ್ನು ಸೇರಿಕೊಂಡರು. ಇಷ್ಟಾದರು ಆ ವಿಪ್ರರು ಬಿಡದೆ ಸರಕಾರದಲ್ಲಿ ಕಾರ್ಯವೆಸಗಲು, ಸರಕಾರದವರು ಅವರಿಗೆ ಪರಂಪರೆಯಿಂದ ನಡೆಯುತ್ತಬಂದ ರಾಜರ ಸಮ್ಮತವಾದ ಸನುದುಗಳ ಹಕ್ಕಿಗೆ ನೀವು ಅಟಕಾಯಿಸಿದ್ದು ನ್ಯಾಯವಲ್ಲವೆಂತಲೂ, ಅವರು ತಮ್ಮ ಪದ್ಧತಿ ಯಂತೆ ಬೇಕಾದಲ್ಲಿ ಬಿಜಯಂಗೈಯಬಹುದೆಂತಲೂ ಠರಾಯಿಸಿ, ಹುಕುಮನ್ನು ಸಹ ಕೊಡಲು, ಆಗ ವಿಪ್ರರು ನಿರುಪಾಯರಾಗಿ ತಣ್ಣಗಾದರು ಇತ್ತಲು “ ಶ್ರೀಸ್ವಾಮಿಗ ಳು ” ದೇಶದ ಭಕ್ತಮಾಹೇಶ್ವರರ ಆಚಾರವಿಚಾರಗಳ ಮೊಕದ್ದಮೆಗಳನ್ನು ಚ ವಕಸಿ ಮಾಡುತ್ತಾ. ನ್ಯಾಯವಾದಸಂಗತಿಯನ್ನೇ ಠರಾಯಿಸುತ್ತಾ, ಕಪ್ಪಕಾಣಿಕೆ ಗಳಂ ಸ್ವೀಕರಿಸುತ್ತಾ, ಲಿಂಗಪೂಜಾ ಜಂಗಮದಾಸೋಹಾದಿಗಳನ್ನು ಮಾಡುತ್ತಾ,

5338

ದುಂದುಭಿ ಸಂವತ್ಸರದಲ್ಲಿ ನಿರ್ಗುಣ ಲೀಲೆಯುಂ ಧಾರಣಂಗೈದರು. ಇವರ ತೋರ ಗದ್ದುಗೆಯು ಬೃಹನ್ಮಠದಲ್ಲಿರುವದು. ಇವರು ಕಲಿಶಕೆ ( ೪೯೪೫ ) ನೆಯ ಕ್ರೋಧಿ ಸಂವತ್ಸರದಲ್ಲಿ ಚಿನ್ಮೂಲಾದ್ರಿ ಶೂನ್ಯಸಿಂಹಾಸನದ ಪಟ್ಟಾಧಿಕಾರಿಗಳಾಗಿ ( ೧೮ ) ವರುಷವಿದ್ದು ಕಲಿಶಕೆ ( ೪೯೬೩ ) ನೆಯ ದುಂದುಭಿ ಸಂವತ್ಸರದ ಪುಷ್ಯ ಮಾಸದಲ್ಲಿ ಸಾಂಬಲೋಕವನ್ನೈದಿದರು.

ಅಂತು ಇಲ್ಲಿಗೆ ಇಪ್ಪತ್ತು ಪಟ್ಟಗಳಾದವು ಈ ಪಟ್ಟಗಳ ವಟ್ಟು ವರ್ಷಗಳ ವಿವರವು.

ಶ್ರೀಗುರುಚನ್ನಬಸವಾರ್ಯರಾದಿಯಾಗಿ ಕಟ್ಟಿಗಿಹಳ್ಳಿಸ್ವಾಮಿಗಳ ಅಪ್ಪೈರವರೆಗೆ ಆದ ವರ್ಷಗಳು.—( ೩೭೯ ) ಕ್ಕೆ ಆದ ಪಟ್ಟಗಳು ( ೭ ) ಈ ಏಳು ಪಟ್ಟಗಳ ಮಧ್ಯ ಪಟ್ಟವಿಲ್ಲದೆ ನಿಂತ ವರ್ಷಗಳು— ( ೪೩ )

ಶ್ರೀಮುರಿಗ್ಯಾಕರ್ತರು ದಿಲ್ಲಿಯಿಂದ ಬಂದ ಬಳಿಕಲ್ಲಿಂದ ಆದ ಪಟ್ಟ ( ೧೦ ) ಕ್ಕೆ ಆದ ವರುಷಗಳು— ( ೫೩೭ ) ಈ ( ೧೦ ) ಪಟ್ಟಗಳ ಮಧ್ಯದಲ್ಲಿ ಪಟ್ಟವಿಲ್ಲದೆ ನಿಂತ ವರುಷಂಗಳು— ( ೩ )

( ೪೦೦೧ ) ರಾಕ್ಷಸಸಂವತ್ಸರದ ಚನ್ನಬಸವಣ್ಣನವರ ಪಟ್ಟದಿಂದ ಚನ್ನವೀರಸ್ವಾಮಿಗಳ ಅಪ್ಪೈರವರೆಗೆ ಆದ ( ೨೦ ) ಪಟ್ಟಗಳು ಅಂತೂವರ್ಷಗಳು( ೯೬೨ )

---

॥ ಶ್ರೀಮನ್ಮಹಾಲಿಂಗಸ್ವಾಮಿನೇನಮಃ ॥

# ೨೧ನೇ ಪಟ್ಟ

ಉ. ಮಾ. ವೃ.

ಶ್ರೀಶಿವರಾಜಯೋಗಿ ಶಿವಪೇಟೆಯು ಸನ್ಮಠದಿಂದೆಬಂದಿರ ।
ಲ್ಕಾಶಿವನಂತೆತೋರ್ಪಮಹಾಲಿಂಗ ಸುನಾಮದದಿವ್ಯಮೂರ್ತಿಯುಂ ॥
ಆ ಶಿವಭಕ್ತರೆಲ್ಲ ವರ ದುಂದುಭಿ ಫಾಲ್ಗುಣಶುದ್ಧಪಕ್ಷದೋ ।
ಳಾಶುಭಭಾನುವಾರದಲಿಪಟ್ಟವಕಟ್ಟಿದರಾಗತೋಷದಿಂ ॥ ೧ ॥

ಈ ( ೨೧) ನೇಪಟ್ಟವು ಸಿದ್ಧಸಂಗಿಯ ಶ್ರೀಮಹಾಲಿಂಗಸ್ವಾಮಿಗಳಿಗೆ ದುಂ

ದುಭಿ ಸಂವತ್ಸರದ ಫಾಲ್ಗುಣಶುದ್ಧ ಪಂಚಮಿ ರವಿವಾರ ಸಿಂಹಲಗ್ನದಲ್ಲಿ ಸಮಸ್ತ ಭಕ್ತ ಮಾಹೇಶ್ವರರಿಂದೆ ಕಟ್ಟಲ್ಪಟ್ಟಿತು. ಇವರು ಪಟ್ಟವನ್ನು ಕಟ್ಟುವಾಗ್ಗೆ ಸಮಸ್ತ ಭಕ್ತ ಮಾಹೇಶ್ವರರಿಗೆ ಹೇಳಿದ್ದೇನೆಂದರೆ— ನಮಗೆ ಪಟ್ಟವಾದಮೇಲೆ ನಾವು ನಮ್ಮಿಚ್ಛಾನುಸಾರ ವರ್ತಿಸ ತಕ್ಕವರು. ಪರಿವಾರದೊಂದಿಗೆ ಸಕಲ ದೇಶಂಗಳನ್ನು ಸಂಚರಿಸುವೆವು. ಈ ನಮ್ಮಿಚ್ಛೆಗೆ ಯಾರೂ ಅಡ್ಡಿಯಂ ತರಕೂಡದು, ಈ ಮೇರಿಗೆ ನಾವಾಡಿದ ಮಾತು ನಿಮಗ ಸರಿತೋರಿದರೆ, ನಾವು ಈ ಪಟ್ಟವನ್ನು ಸ್ವೀಕರಿಸುವೆವು. ಹಾಗಿಲ್ಲದಿರ್ದರೆ ಈ ಪಟ್ಟವು ನಮಗೆ ಬೇಡ. ಬೇಕಾದವರು ಸ್ವೀಕರಿಸಲಿ ಎಂದಾಡಲು, ಸಮಸ್ತ ಭಕ್ತ ಮಾಹೇಶ್ವರರು ಮಹಾಸನ್ನಿಧಿಯ ಚಿತ್ತಕ್ಕೊಪ್ಪಿದ ರೀತಿಯಂತೆ ವರ್ತಿಸಬಹುದೆಂದು ಶೃತಗೊಳಿಸಿ. ನಾವುಗಳೆಲ್ಲರೂ ನಿಮ್ಮಾಜ್ಞಾನುಸಾರ ಪ್ರವರ್ತಿಸುವೆವೆಂದು ಹೇಳಿದರು. "ಶ್ರೀಗಳವರು" ಲಿಂಗಪೂಜಾ ಜಂಗಮದಾಸೋಹಂಗಳನ್ನು ಮಾಡುತ್ತಾ, ಸುಖದಿಂದಿರ್ಪ ಸಮಯದಲ್ಲಿ ಮಠದಲ್ಲಿರುವ ಲಕ್ಷಾಂತರ ದ್ರವ್ಯದ ಖಜಾನೆಯನ್ನು ತೆಗೆಸಿ, ಆನೆ - ಒಂಟೆ - ಕುದುರೆಗಳನ್ನು ಬಹಳವಾಗಿ ತರಸಿಕೊಂಡು, ಸಂಸ್ಥಾನದ ಪರಿವಾರಕ್ಕೆ ಬೇಕಾದ ಅನೇಕ ಜನರನ್ನು ರಾಮದುರ್ಗದ ದೇಶದಿಂದ ಕರೆಸಿಕೊಂಡು, ರಾಜವೈಭವದ ಸಿಸ್ತನ್ನು ವೃದ್ಧಿಗೊಳಿಸಿ, ರತ್ನಖಚಿತವಾದನೇಕಾಭರಣಂಗಳಂಮಾಡಿಸಿ, ಸಕಲ ಬಿರುದಾವಳಿಗಳಿಂದೆ ಯುಕ್ತರಾಗಿ ಬಿಜಯಂಗೈಸುವಸಮಯದಲ್ಲಿ, ದುರ್ಗದ ಶೆಟ್ಟರು ದೈವದವರು ದೇಶದಮೇಲೆ ಸ್ವಾರಿ ಚಿತ್ತೈಸಕೂಡದೆಂದು ಹೇಳಿಕಳುಹಿಸಲು, "ಸ್ವಾಮಿಗಳು" ಮಹಾ ಕೋಪಾನ್ವಿತರಾಗಿ, ಪ್ರಯಾಣವು ಎಂದಿಗೂ ತಡೆಯಲಾಗದು, ನಾವು ಹೊರಡುವ ವೇಳೆಯಲ್ಲಿ ಯಾರಾದರೂ ತಡೆಯುವದಕ್ಕೆ ಬಂದದ್ದಾದರೆ, ಅವರನ್ನು ದರ್ಯಾಪ್ತಿಮೂಲಕ ಸರಕಾರದವರಿಗೆ ಒಪ್ಪಿಸಬೇಕೆಂದು, ತಮ್ಮ ಸಮಸ್ತ ಪರಿವಾರದವರಿಗೆ ಆಜ್ಞಾಪಿಸಲು, ಈ ವಾರ್ತೆಯನ್ನು ದುರ್ಗದವರು ಕೇಳಿ, "ಮಹಾಸನ್ನಿಧಿಯು" ಹೊರಡುವ ವೇಳೆಯಲ್ಲಿ ಹೆದರಿ ಯಾರೂ ಅಲ್ಲಿಗೆ ಬರಲಿಲ್ಲವು. ಆಗ್ಗೆ "ಶ್ರೀಗಳವರು" ದಿಗ್ವಿಜಯ ಪ್ರಯಾಣವನ್ನು ಬೆಳಿಸಿ, ದಾವಣಗೇರಿ - ಹರಿಹರ - ರಾಣೇಬೆನ್ನೂರ - ಬ್ಯಾಡಗಿ - ಹಾವೇರಿ - ಮುಂತಾದ ಸ್ಥಳಗಳಿಗೆ ಬಂದು, ಆ ಎಲ್ಲಾ ಗ್ರಾಮಗಳಿಂದೆ ( ೫೦೦೦೦ ) ರೂಪಾಯಿಗಳನ್ನು ಕಾಣಿಕೆ ವಸೂಲಮಾಡಿದರು. ಬಂಕಾಪುರಕ್ಕೆ ಬಿಜಯಂಗೈಸಿರುವಲ್ಲಿ ಸವಣೂರ ಸಂಸ್ಥಾನದ ನವಾಬಬಹದ್ದೂರವರು "ಶ್ರೀಗಳವರ" ಮಹಿಮಾ ಮತ್ತು ಪ್ರತಾಪಗಳನ್ನು ಕೇಳಿ, ತನ್ನ ಗ್ರಾಮಕ್ಕೆ "ಶ್ರೀಗಳವರು" ಬಿಜಯಂಗೈಸುವಬಗ್ಗೆ ಒಂದು ಬಿನ್ನಹಪತ್ರವನ್ನು ಬರೆಸಿ, ತನ್ನ ಕಾರಭಾರಿಗಳನ್ನಾ

ಅಲ್ಲಿಯ ಶೆಟ್ರು ದೈವದವರನ್ನೂ, ಸಹ ಬಂಕಾಪುರಕ್ಕೆ ಕಳುಹಿಸಿಕೊಟ್ಟರು. ಹೋದವರು ಬಹುತರವಾಗಿ ಬೇಡಿಕೊಂಡದ್ದರಿಂದ, ನವಾಬಸಾಹೇಬರ ಬಿನ್ನಹಕ್ಕೊಪ್ಪಿಕೊಂಡು, ಬಂಕಾಪುರದ ಕಾಣಿಕೆಯನ್ನು ತೆಗೆದುಕೊಂಡು, ಸಕಲ ರಾಜವೈಭವದ ಪರಿವಾರದೊಂದಿಗೆ ( ೭೨ ) ಬಿರುದಾವಳಿಗಳು ಸಹ ಸವಣೂರಿಗೆ ಬರಲಾಗಿ, ನವಾಬ ಬಹದ್ದೂರವರು ಪರಮೋತ್ಸಾಹದಿಂದ ಎದುರ್ಗೊಂಡು, ಊರಲ್ಲಿ ಪ್ರವೇಶಿಸುವಾಗ್ಗೆ ಅಲ್ಲಿಯ ಕೆಲವು ಬ್ರಾಹ್ಮಣರು ಸೈರಿಸದೆ ಅಡ್ಡಪಲ್ಲಕ್ಕಿ - ವ್ಯಾಸನಕೋಲು - ಮುಂತಾದವುಗಳನ್ನು ನೀವು ಉಪಯೋಗಿಸಕೂಡದೆಂದು ಅಡ್ಡೀಮಾಡಲು, ಅವರನ್ನೆಲ್ಲಾ ಒತ್ತಟ್ಟಿಗೆ ಕತ್ತನ್ನಹಿಡಿದು ದಬ್ಬಿ, “ ಶ್ರೀಗಳವರ ” ಆಗಮನೋತ್ಸಾಹವನ್ನು ನವಾಬರವರು ಸಾಂಗಗೊಳಿಸಿ, ಕೂಡಲೇ ಬ್ರಾಹ್ಮಣರು ಮಾಡಿದ ಧಾಂದಲೆಯ ವಿಷಯವನ್ನು ರಿಪೋರ್ಟಿನಿಂದ ತಮ್ಮ ಸಂಸ್ಥಾನದ ಪೊಲಿಟಕಲ್ ಎಜೆಂಟರಾದ ಮೆ॥ ಕಲೆಕ್ಟರವರಿಗೆ ತಿಳಿಸಿದರು. ಈ ಬಗ್ಗೆ ಬ್ರಾಹ್ಮಣರು ತಮ್ಮ ದೂರನ್ನು ಅರ್ಜಿಯ ಮೂಲಕವಾಗಿ ಸದರ ಸಾಹೇಬರಿಗೆ ತಿಳಿಸಲು, ಆ ಕಲೆಕ್ಟರವರು ಸವಣೂರ ನವಾಬ ಸಾಹೇಬರು ತಮ್ಮ ಸಂಸ್ಥಾನಕ್ಕೆ ಅಧಿಕಾರಿಗಳಾಗಿರುತ್ತಾರೆ. ಅವರು ಮಾಡಿದ ಈ ಕೆಲಸದಲ್ಲಿ ನಾವು ಕೈಹಾಕುವದಿಲ್ಲೆಂಬದಾಗಿ ಉತ್ತರವನ್ನು ಕೊಟ್ಟಮೇಲೆ, ಬ್ರಾಹ್ಮಣರು ನಿರಾಶದಿಂದ ಶಾಂತಚಿತ್ತರಾಗಿ, ತಂತಮ್ಮ ಮನೆಗಳಲ್ಲಿ ಕೂತುಕೊಂಡರು. ಆ ನಂತರ ನವಾಬರಿಂದ ಸಲ್ಲಿಸಿದ, ಸನ್ಮಾನವನ್ನಾ ಕಾಣಿಕೆಯನ್ನಾ ಸ್ವೀಕರಿಸಿ, ಆ ಊರಿನ ಭಕ್ತ ಮಾಹೇಶ್ವರರ ಕಾಣಿಕೆಯನ್ನು ತೆಗೆದುಕೊಂಡು, ಸರ್ವರಿಗೂ ಆಶೀರ್ವಾದವನ್ನು ದಯದಿಂದಿತ್ತು, ಉತ್ತರದೇಶಕ್ಕೆ ಬಿಜಯಂಗೈಸಿ, ಸಿರಸಂಗೀ ಗ್ರಾಮಕ್ಕೈತಂದು ದೇಸಾಯಿಗಳು “ ಮಹಾಸನ್ನಿಧಿಗೆ ” ಭಕ್ತಿಯಿಂದ ಕೊಡಲ್ಪಟ್ಟ ಅನೇಕದ್ರವ್ಯ ದಾನವನ್ನೂ, ಭೂದಾನವನ್ನೂ ಅಂಗೀಕರಿಸಿ, ಕೆಲವು ದಿವಸಗಳಮೇಲೆ ಮಹೋತ್ಸಾಹದಿಂದ ಚಿತ್ರಕಲ್ದುರ್ಗದ ಚಿನ್ಮೂಲಾದ್ರಿ ಬೃಹನ್ಮಠಕ್ಕೆ ತೆರಳಿದರು. ಮಠದ ಮಹದ್ವಾರದಾಚೆ ಮಠದಸುತ್ತಲೂ ದುರ್ಗದ ಆವರಣೆಯಂ ಮಾಡಿಸಲೋಸುಗ, ಒಂದು ಸಿಲಾಮಯ ವಿಚಿತ್ರವಾದ ಮಹದ್ವಾರವನ್ನು ಮಾಡಿಸಲುದ್ಯುಕ್ತರಾದರು. ಉಳಿವಿಮಹಾಕ್ಷೇತ್ರಕ್ಕೆ ಮಹಾಸನ್ನಿಧಿಯ ಸ್ವಾರಿಯು ಚಿತ್ತೈಸಲು ಅಪೇಕ್ಷೆಯುಂಟಾದ್ದರಿಂದ, ಸಮಸ್ತ ಗ್ರಾಮಗಳ ಭಕ್ತ ಮಾಹೇಶ್ವರರಿಗೆ ಉಳುವಿಯಲ್ಲಿ ನಡೆಸುವ ಮಹಾಗಣಾರಾಧನೆಗೆ ಬೇಕಾದ ಸಕಲ ಸಾಮಗ್ರಿಗಳನ್ನು ಕೊರತೆ ಆಗದಂತೆ ಒಂದೊಂದು ಗ್ರಾಮದವರು ಇಂತಿಷ್ಟು ಜೀನಸಗಳನ್ನು ತಯಾರ ಮಾಡಿಸಿಟ್ಟು, ಇಂತಿಷ್ಟನೇ ದಿವಸಕ್ಕೇಸರಿಯಾಗಿ ಉಳುವಿಗೆ ರವಾನಿಸುವ ಬಗ್ಗೆ ಪೊ

ದಲೇ ಏರ್ಪಾಡ ಮಾಡಿಸಿ, ಆ ಬಗ್ಗೆ ಮಹಾಸನ್ನಿಧಿಗೆ ಲೇಖನ ದ್ವಾರ ಅರಿಕೆ ಮಾಡಿಕೊಳ್ಳುವಂತೆ ನಿರೂಪುಗಳನ್ನು ಸಾದರ ಮಾಡಿಸಿ, ಹಾವೇರಿಸ್ಥಳದಲ್ಲಿ ಶಿಕಾರಿಪುರದ ಜೀನಗಾರ ಯಲ್ಲಪ್ಪನಿಗೆ ಒಂದು ಬೆಳ್ಳಿಮೇಣೆಯನ್ನು ತಯಾರ ಮಾಡುವದಕ್ಕೆ ಹಿಡಿದಷ್ಟು ಬೆಳ್ಳಿಯನ್ನು ಕಳುಹಿಕೊಟ್ಟರು. ಸರ್ವ ದೇಶಗಳಿಂದ, ಸಾಮಗ್ರಿ ತಯಾರಾದಬಗ್ಗೆ, ಜಿನ್ನಹ ಪತ್ರಗಳುಬರಲಾಗಿ, ಸರ್ವ ದೇಶಕನ್ನಾ ತಯಾರಾಗಿರುವ ಸರ್ವ ಸಾಮಗ್ರಿಗಳು ಸಹ ಇಂಥ ಮಿತಿಗೆ ಸರ್ವ ಭಕ್ತ ಮಾಹೇಶ್ವರರು ಹಾಜರಾಗತಕ್ಕದ್ದೆಂದು ಲೇಖನದ್ವಾರ ನಿರೂಪಿಸಿ, “ ಶ್ರೀಗುರುಮುರಿಗೇಶನ ಅಪ್ಪಣೆಯಂ ಪಡೆದು, ” ಏಳನೂರು ಚರಮೂರ್ತಿಗಳೂ, ಮೂರುಸಾವಿರ ವಿರಕ್ತರೂ, ಸಹವಾಗಿ ಚದುರಂಗ ಬಲದೊಂದಿಗೆ ರಾಜವೈಭವದಿಂದೆ ಎಪ್ಪತ್ತೆರಡು ಬಿರುದಾವಳಿ ಸಹ ಬೃಹನ್ಮಠದಿಂದೆ ಹೊರಟು, ಮೇಲುಗೈಯಲ್ಲಾಪುರ ಮಾರ್ಗವಾಗಿ ಬಿಜಯಂಗೈಸುವಾಗ್ಗೆ ರಕ್ಕಸಿಯ ಬೆಟ್ಟದಲ್ಲಿ ತಾವು ಮೂರ್ತಮಾಡಿ ಪ್ರಯಾಣಿಸುವ ಬೆಳ್ಳಿ ಮೇಣೆಯ ದಂಡಿಗಿಯು ಮುರಿಯಲಾಗಿ, ಮತ್ತೊಂದು ಮೇಣಾದಲ್ಲಿ ಮಂಡಿಸಿ, ಉಳವೀಕ್ಷೇತ್ರಕ್ಕೆ ಬಂದು ನೋಡುವಲ್ಲಿ, ನಾನಾತರವಾದನೇಕ ವಾದ್ಯಂಗಳ ರವದಿಂದಲೂ, ಲಕ್ಷಾಂತರ ಜನಗಳ ಸಮೂಹದಿಂದಲೂ, ಭವ್ಯವಾದ ಹಂದರ ವ, ಸಿಂಹಾಸನದಿಂದಲೂ, ಅನಾಜಿನಿಂದಲೂ, ನಾಲ್ಕುತಾಲೂಕಿನ ಮಾಮಲೇದಾರ ಫೌಜದಾರ ವ, ಪೊಲೀಸ ಜನರಿಂದಲೂ, ಅಧಿಕಾರಿಗಳಾದ ಮೂರುಜನ ಯುರೋಪಿರ್ಯ ಸಾಹೇಬರಿಂದಲೂ, ಭರಿತವಾಗಿ ಒಪ್ಪುವಾಸ್ಥಳವನ್ನೀಕ್ಷಿಸಿ, ಆನಂದಮಯರಾದರು. ಮರುದಿನ ಮಹಾರಾಧನೆಯಗೋಸ್ಕರ ಪಾಕವು ಸಿದ್ಧವಾಗುವಂತೆ ಅಪ್ಪಣೆಯಂ ಮಾಡಿದರು. ಆ ವೇಳೆಯಲ್ಲಿ ಆ ಅನಾಚಿನಮೇಲೆ ಒಂದು ಘಟಸರ್ಪವು ಹೆಡಿಯನ್ನೆತ್ತಿಕೊಂಡಾಡುತಿರ್ಪುದಂ ಸರ್ವರು ನೋಡಿ, ಇದೇನಾಶ್ಚರ್ಯಮೆಂದು, ಆ ಸ್ಥಲವನ್ನಗಿಯಲು ಒಂದು ವಿಸ್ತಾರವಾದ ಕೋಣವು ಹೊರಟಿತು. ಈ ಸಂಗತಿಯನ್ನು “ ಸನ್ನಿಧಿಗೆ ” ತಿಳಿಸಲು, “ ಮಹಾಸನ್ನಿಧಿಯು ಪೂರ್ವದಲ್ಲಿ ಚನ್ನಬಸವೇಶ್ವರದೇವರು ಮಾಡಿದ ಗಣಪ್ರಸ್ತಕಾಲಕ್ಕೆ ಇದ್ದದ್ದು ಶಾಕಪಾಕವನ್ನು ಹಾಕುವದಕ್ಕೆ ಅವರೇ ಆ ಕೋಣವನ್ನು ತಯಾರ ಮಾಡಿಸಿರುವರು. ಅದ್ದರಿಂದ ನೀವು ತಯಾರಮಾಡಿಸುವ ಅನ್ನವನ್ನು ಅದರಲ್ಲೇ ಹಾಕತಕ್ಕದ್ದೆಂದು ಅಪ್ಪಣೆ ಮಾಡಿ, ಈಗ ಅಡಿಗೆ ಮಾಡುವ ಸ್ಥಲವೇ ಪ್ರಮಥರು ಭೋಜನಮಾಡುವ ಸ್ಥಲವು. ಸಿಂಹಾಸನದ ಮಂಟಪವನ್ನು ಹಾಕಿರುವ ಜಾಗೆಯೇ ಚನ್ನಬಸವಣ್ಣನವರು ಗುರುವಾಗಿ ಕೂತಸ್ಥಳವು. ಅದ್ದರಿಂದ ನಮ್ಮ ಈ ಮಹಾಗಣಾರಾಧನೆಯು ಯಾವ ಅತಂಕವಿಲ್ಲದೆ ಜರಗುವದೆಂ

ದು ಹೇಳಿದರು. ಪಾಕವು ತಯಾರಾದಮೇಲೆ ಗಣಾರಾಧನೆಯನ್ನು ಪೂರೈಸಿ, ಅನೇಕ ದಾನಧರ್ಮಗಳನ್ನು ಮಾಡಿ, " ಸಿಂಹಾಸನದಮೇಲೆ " ಮೂರ್ತಮಾಡಲು, ಎಡಬಲದಲ್ಲಿರುವ ಚರಮೂರ್ತಿಗಳಿಂದಲೂ, ಸ್ತುತಿಪಾಠಕರಿಂದಲೂ, ಜಯಧ್ವನಿಯಂಗೈವರಿಂದಲೂ, ನಟನರ್ತಕೀ ಗಾಯಕರಿಂದಲೂ, ಕವಿವಾಗ್ಮಿಗಳಿಂದಲೂ, ಬೆಳ್ಳಿ ಭಂಗಾರದ ಚೋಪದಾರರಿಂದಲೂ, ಢಾಳಿಸುವ ಚಾಮರಗಳಿಂದಲೂ, ಹಿಡಿದ ಶ್ವೇತಛತ್ರಾತಪತ್ರಂಗಳಿಂದಲೂ, ಮಹಾತ್ವವನ್ನು ಕೊಂಡಾಡುವ ಭಟ್ಟಂಗಿಗಳಿಂದಲೂ, ಭೋರ್ಗರೆಯುವ ನಾನಾತರವಾದ ವಾದ್ಯಂಗಳಿಂದಲೂ, ಕೂಡಿದಾಸಭೆಯು ಕೈಲಾಸಾಧಿಪತಿಯಾದ " ಶ್ರೀಶಂಕರನ " ಸಭೆಯೆಂತೆ ಕಂಗೊಳಿಸಿತು. ಆಗ್ಗೆ ಸರ್ವರಿಗೂ ಆಶೀರ್ವಾದವಂ ಕೊಟ್ಟು, ಸರಕಾರಿ ಅಧಿಕಾರಿಗಳಿಗೆ ಸನ್ಮಾನವಂ ಮಾಡಿ, ನಾಳೇದಿನ ನಮ್ಮ ಸಂಗಡ ಬರತಕ್ಕವರು ಬರತಕ್ಕದ್ದು. ತಮ್ಮತಮ್ಮ ಸ್ಥಲಕ್ಕೆ ಗಮಿಸುವವರು ಗಮಿಸತಕ್ಕದ್ದೆಂದು ಡಂಗುರವಂಪೊಯಿಸಿ, ಮರುದಿನ ಸಕಲ ಪರಿವಾರದೊಂದಿಗೆ ಹೊರಟು ಹೋಗಿ, ಬಾಗಲಕೋಟೆಯೆಂಬ ಸ್ಥಳಕ್ಕೆ ಆಗಮಿಸಲು, ಅಲ್ಲಿಯ ಶೆಟ್ಟರು ದೈವದವರು ಆನೆಯಮೇಲೆ ಅಂಬಾರಿಯನ್ನು ಕಟ್ಟಿಸಿ, ಅದರಮೇಲೆ ಸ್ವಾಮಿಗಳನ್ನು ಕೂಡ್ರಿಸಿ, ಸಮಸ್ತ ಬಿರುದಾವಳಿ ರಾಜವೈಭವದೊಡನೆ ಉತ್ಸಾಹದಿಂದೆ ಕರತರಲು, ಕೋಟೆಯ ಬಾಗಿಲು ಸಣ್ಣದಿದ್ದು, ಅಂಬಾರಿ ಸಹ ಆನೆಯು ಹೋಗುವದಕ್ಕೆ ಅಡ್ಡಿಯಾಗಲು ತಿರಿಗಿ ಕಟ್ಟಿಸಿದರಾಯಿತೆಂದು, ಆ ಕೋಟೆಯ ಬಾಗಿಲ ಮೇಲಭಾಗವನ್ನು ಕೆಡವಿಸಿದರು. ಆಗ್ಗೆ " ಶ್ರೀಸ್ವಾಮಿಗಳವರು " ಊರಲ್ಲಿ ಉತ್ಸಾಹದಿಂದೆ ತೆರಳಿದರು. ಆಗ ಅಲ್ಲಿರುವ ಬ್ರಾಹ್ಮಣಾಧಿಕಾರಿಗಳು ಈ ಸಂಗತಿಯನ್ನು ಕುರಿತು — ರಿಪೋರ್ಟಿನಿಂದ ಕಲೆಕ್ಟರವರಿಗೆ ತಿಳಿಸಲು, ಆ ಕಲೆಕ್ಟರ ಊಳಿವಿಯಲ್ಲಿ ನಡೆಸಿದ ಪರಮೋತ್ಸಾಹವನ್ನು ಬಲ್ಲವರಾದಕಾರಣ, ಬಾಗಲಕೋಟೆಗೆ ಬರಲು, ಅವರನ್ನು ದರ್ಶನಕ್ಕೆ ಸ್ವಾಮಿಗಳು ಕರೆಸಿಕೊಂಡು, ಕೋಟೆಯ ಬಾಗಿಲನ್ನು ಇದ್ದಂತೆ ಕಟ್ಟಿಸುವದೆಂದು ತಿಳಿಸಲು, ಆ ಮೊಕದ್ದುಮೆಯನ್ನು ವಜಾಮಾಡಿ ತಮ್ಮಸ್ಥಾನಕ್ಕೆ ಸ್ವಾಮಿಗಳಿಂದೆ ಸನ್ಮಾನವನ್ನು ಹೊಂದಿ ತೆರಳಿದರು. ಮಹಾಸ್ವಾಮಿಗಳು ಬಾಗಲಕೋಟೆಯ ಕಪ್ಪಕಾಣಿಕೆಯನ್ನು ತೆಗೆದುಕೊಂಡು, ಭಕ್ತರಿಗೆಲ್ಲಾ ಆಶೀರ್ವಾದವನ್ನಿತ್ತು, ಅಲ್ಲಿಂದ ಗುಳೇದಗುಡ್ಡಕ್ಕೆ ಬರಲು, ಆ ಗ್ರಾಮದ ದೇವಾಂಗದವರು ತಡೆಯಲು, ಅವರಂ ಕೇಳದೆ ಗ್ರಾಮದಲ್ಲಿ ಉತ್ಸಾಹದಿಂದೆ ಪೊಕ್ಕು ಅಲ್ಲಿಕಾಣಿಕೆಯಂ ತೆಗೆದುಕೊಂಡು, ಸಿರಸಂಗೀ ಗ್ರಾಮಕ್ಕೆ ಬಂದು ಲಿಂಗೈಕ್ಯರಾದರು. ಇವರ ಗದ್ದುಗೆಯು ಸಿರಸಂಗೀ ಗ್ರಾಮದಲ್ಲಿ ಆಯಿತು. ಇವರು ( ೧೧ ) ಲ

ಕ್ಷ ರೂಪಾಯಿ ಸಂಪಾದಿಸಿ, ( ೯ ) ಲಕ್ಷ ರೂಪಾಯಿ ಖರ್ಚ ಮಾಡಿದ್ದರು. ಖ ಜಾನೆಯ ಅಧ್ಯಕ್ಷರಾದ ಪಂಚಾಕ್ಷರಪ್ಪನವರು ಸ್ವಾಮಿಗಳ ಸರ್ವಾಭರಣ ವ, ಖ ಜಾನೆ ವ, ಸಕಲ ಪರಿವಾರ ಸಹ ಚದುರಂಗ ಬಲವನ್ನು ದುರ್ಗದ ಬೃಹನ್ಮಠಕ್ಕೆ ತಂದೊಪ್ಪಿಸಿದರು. ಇವರು ( ೭ ) ವರುಷ ಪಟ್ಟವಾಳಿದರು. ಕಲಿಶಕೆ ( ೪೯೭೦ ) ಶಾಲಿವಾಹನಶಕೆ ( ೧೭೯೦ ) ಕ್ಕೆ ( ೨೧ ) ಪಟ್ಟಕ್ಕೆ ಆದವರ್ಷಗಳು ( ೯೬೯ ) ಈ " ಮಹಾಲಿಂಗಸ್ವಾಮಿಗಳು " ವಿಭವ ಸಂವತ್ಸರದ ಭಾದ್ರಪದ ಶುದ್ಧ ( ೬ ) ಶು ಕ್ರವಾರ ಸಾಯಂಕಾಲದ ( ೬ ) ಘಂಟೆಗೆ ಶಿರಸಂಗೀಯಲ್ಲಿ ಲಿಂಗೈಕ್ಯರಾದರು.

---

॥ ಶ್ರೀಮದ್ರುದ್ರಮಹಾಸ್ವಾಮಿನೇನಮಃ॥

# ೨೨ನೇ ಪಟ್ಟ

ಶಾ, ವಿ, ವೃ.

ಶ್ರೀಮದ್ರುದ್ರಯತೀಂದ್ರ ಭದ್ರ ವಿಲಸಚ್ಚಜ್ಯೋತಿಸತ್ಯಂಗಣ ।
ಸ್ತೋಮಾಲಂಕರಣಾದ್ಯ ಮಂಗಲವಿಭು ಸನ್ಮಾರ್ಗಯುಕ್ತಂ ಮಹಾ ॥
ಕಾಮಧ್ವಂಸನಿಭಂ ಸದಾ ಪ್ರವಿಮಳ ಶ್ರೀಸಾಂಬರೂಪಾನ್ವಿತಂ ।
ಪ್ರೇಮಂಬೆತ್ತುರೆಭಕ್ತರಂಪೊರೆಗೆ ಸರ್ವಾನಂದದಿಂ ಬೇಗದಿಂ ॥ ೧ ॥

ಈ ಇಪ್ಪತ್ತೆರಡನೇ ಪಟ್ಟವು ವಿಭವಸಂವತ್ಸರದ ಕಾರ್ತೀಕ ಬ॥ ( ೧೦ ) ದಿವಸ ಹೆಬ್ಬಾಳೆಂಬ ಗ್ರಾಮದ ವಿರಕ್ತಮಠದ ಷಟ್ಸ್ಥಲ ಮೂರ್ತಿಗಳಾದ, " ಶ್ರೀ ರುದ್ರ ಸ್ವಾಮಿಗಳೆಂಬ " ಯತಿವರ್ಯರಿಗಾಯಿತು. ಇವರು ಚಿನ್ಮೂಲಾದ್ರಿ ಬೃಹನ್ಮ ಠದಲ್ಲಿ ಲಿಂಗಪೂಜಾ, ಜಂಗಮದಾಸೋಹ ಮುಂತಾದ ಸತ್ಕಾರ್ಯ ನಿರತರಾಗಿ ರುತ್ತಾ, ಶಿವಸಾಮ್ರಾಜ್ಯ ವೈಭವ ಯುತರಾಗಿ, ಕೆಲವು ದಿವಸ ಬೃಹನ್ಮಠದಲ್ಲಿ ಸುಖ ದಿಂದಿದ್ದು, ಸಂಚಾರಾರ್ಥವಾಗಿ ಹೊರಟು, ಗ್ರಾಮಾನು ಗ್ರಾಮಂಗಳಂ ಸಂಚ ರಿಸುತ್ತಾ, ದರ್ಶನಾದಿಗಳಿಂದ ಭಕ್ತರನ್ನು ಪವಿತ್ರರಂ ಮಾಡುತ್ತಾ, ಭಕ್ತರಭಕ್ತಿ ಕಾ ಣಿಕೆಯಂ ಸ್ವೀಕರಿಸುತ್ತಾ, ಮಹಿಮಾ ಶಾಲಿಗಳಾಗಿ, ರಾಜವೈಭವಗಳಿಂದಲೂ, ೭೨ ಬಿರುದಾವಳಿಗಳಿಂದಲೂ, ಉತ್ಸಾಹಂಗೊಳ್ಳುತ್ತಾ, ದಾವಣಗೇರಿ - ರಾಣೇಬೆನ್ನೂರ ಗ್ರಾಮಕ್ಕೆ ವಿಜಯಂಗೈಸಿ, ಭಕ್ತರ ಕಾಣಿಕೆಯಂ ವಸೂಲ ತೆಗೆದುಕೊಂಡು, ಯುವ ಸಂವತ್ಸರದಲ್ಲಿ ಹಿರೇಕೇರೂರಿಗಾಗಮಿಸಲು, ವಿಜಯ ದಶಮಿಯು ಸಮೀಪಿಸಿರುವ

ಪರಿಂದ ವಿಜಯದಶಮಿಯ ಉತ್ಸಾಹವನ್ನು ಇಲ್ಲಿಯೇ ಜರಗಿಸಬೇಕೆಂಬದಾಗಿ, ಅಲ್ಲಿಯ ಸದ್ಭಕ್ತರೆಲ್ಲಾ ಬಿನ್ನೈಸಿಕೊಳ್ಳಲು, ಆ ಮೇರೆಗೆ ವಿಜಯ ದಶಮಿಯ ಪರ ಮೋತ್ಸಾಹವನ್ನು ಅತಿ ವಿಜ್ರಂಭಣೆಯಿಂದಲೂ, ರಾಜವೈಭವಾದಿ ಸರ್ವ ಬಿರುದಾ ವಳಿಗಳಿಂದಲೂ ನೆರವೇರಿಸುವ ಕಾಲದಲ್ಲಿ, ( ೫೦ - ೬೦ ) ಸಾವಿರ ಜನರು ಕೂ ಡಿದ್ದರು. ಆ ಕೂಡಿದ ಜನರು ವಿಜಯ ದಶಮಿಯ ಉತ್ಸಾಹವನ್ನು ತೀರಿಸಿಕೊಂಡು ಸಕಲರು ಕಾಣಿಕೆಯಂ ಸಲ್ಲಿಸಿ ಸಾಷ್ಟಾಂಗವೆರಗಿ,ಆಶೀರ್ವಾದವಂ ತೆಗೆದುಕೊಳ್ಳು ವ ಕಾಲದಲ್ಲಿ, ಕೆಲವರ ಮುಂಗೈಯಲ್ಲಿರುವ ಬೆಳ್ಳಿ, ವ ಭಂಗಾರದ ಸರಿಗಿಗಳನ್ನು ನೋಡಿ, ಮಹಾ॥ ॥ ಸ್ವಾಮಿಗಳು ಆ ಎಲ್ಲಾ ಸರಿಗಿಗಳನ್ನು ತೆಗೆಸಿ,ಇನ್ನುಮುಂದೆ ಯಾರಾದರೂ ಈ ರೀತಿಯಂತೆ ವರ್ತಿಸಿದ ಪಕ್ಷದಲ್ಲಿ, ಮಹಾ॥ ॥ ಸನ್ನಿಧಿಯಿಂ ದ ಬಹಿಷ್ಕಾರವು ಕೊಡಲಾಗುವದೆಂದು ಖಂಡಿತವಾಗಿ ಹೇಳಿ, ಕಟ್ಟಳೆಯಂ ಮಾಡಿ ದರು. ಅಲ್ಲಿಂದ ಪ್ರಯಾಣಿಸಿ,ಅನೇಕಗ್ರಾಮಗಳ ಭಕ್ತರ ಕಾಣಿಕೆಯಂ ತೆಗೆದುಕೊಂ ಡು, ಹಾವೇರಿಯೆಂಬ ಗ್ರಾಮಕ್ಕೆ ಬಿಜಯಂಗೈಸಲು, ಅಲ್ಲಿರುವ ಭಕ್ತಮಹೇಶ್ವರರೆ ಲ್ಲಾ ಈ ಧಾತು ಸಂವತ್ಸರದ ಆಶ್ವಿನ ಮಾಸದ ವಿಜಯ ದಶಮಿಯ ಉತ್ಸಾಹವನ್ನು ಇಲ್ಲಿಯೇ ಜರಗಿಸಬೇಕೆಂಬದಾಗಿ, ಬಹು ವಿಧದಿಂದ ಪ್ರಾರ್ಥಿಸಲು, ಮಹಾ॥ ॥ ಸ್ವಾಮಿಗಳು ಆ ವರ್ಷದ ವಿಜಯ ದಶಮಿಯ ಪರಮೋತ್ಸಾಹವನ್ನು ಮಹಾವೈಭ ವದಿಂದ ಸಾಂಗ ಮಾಡಿದರು. ಸ್ವಾಮಿಯವರ ಶೂನ್ಯ ಸಿಂಹಾಸನವೆಂಬ ಮಂಟಪವು ಅತಿ ಮನೋಹರ ವಾಗಿಯೂ, ನೋಡುವವರ ನೇತ್ರಂಗಳಂ ಆನಂದ ಗೊಳಿಸುವ ದಾಗಿಯೂ, ಬಹುಚಿತ್ರವಿಚಿತ್ರ ಕರನೂದ ಕೈಗಾರಿಕೆಯ ಕೆಲಸಗಳಿಂದೊಪ್ಪುವ ದಾಗಿತ್ತು. ಈ ಪರಮೋತ್ಸಾಹಕ್ಕೆ ಲಕ್ಷಾಂತರ ಜನರು ಕೂಡಿದ್ದರು. ( ೧೦ ) ದಿ ವಸಗಳ ವರೆಗೆ ಆದ ಪರಮೋತ್ಸಾಹವು ವರ್ಣನೀಯ ವಾಗಿತ್ತು; ವಿಜಯ ದಶ ಮಿಯ ದಿವಸ,, ಮಹಾಸ್ವಾಮಿಗಳು,, ಶೂನ್ಯ ಸಿಂಹಾಸನದ ಮೇಲೆ ಮೂರ್ತಗೊಳ್ಳ ಲು ಆಗ ಅಲ್ಲಿ ಉಂಟಾದ ಜನಸಂದಣಿಯನ್ನು ವರ್ಣಿಸಲಳವಲ್ಲ; ಸದರಿನಿಂದೆದ್ದ ಕೂ ಡಲೆ ಅಂಬಾರಿಯಿಂದಲೂ, ಜರತಾರಿ ಭಾರಿಕೀಮ್ಮತ್ತುಳ್ಳ ಭರ್ಜರಿ ಜೂಲಗಳಿಂ ದಲೂ, ಬೆಳ್ಳಿ - ಭಂಗಾರದ ಆಭರಣಗಳಿಂದಲೂ, ಶೃಂಗರಿಸಲ್ಪಟ್ಟ ಪಟ್ಟದಗಜದ ಮೇಲೆ ಮೂರ್ತಮಾಡಿ ಸಮಸ್ತ ಬಿರುದಾವಳಿಸಹಿತ ಹಾವೇರಿಯಲ್ಲಿ ಆದಮೆರವಣಿ ಗೆಯ ಉತ್ಸಾಹವು ಅಗೋಚರವಾಗಿತ್ತು. ಆ ಉತ್ಸಾಹಕಾಲದಲ್ಲಿ ಭಕ್ತರು ಒಪ್ಪಿಸಿದ ಕಾಣಿಕೆಯನ್ನು ತೆಗೆದುಕೊಂಡು, ಸಮಸ್ತರಿಗೆ ಆಶೀರ್ವಾದವನ್ನಿತ್ತು, ಅಲ್ಲಿಂದ—ರಾ ಣೇಬೆನ್ನೂರ ಗ್ರಾಮಕ್ಕೆ ಶ್ರೀ॥ ॥ ಸನ್ನಿಧಿಯ ಸ್ವಾರಿಯು ಆಗಮಿಸೋಣಾಯಿ

ತು. ಅಲ್ಲಿ ಕೆಲವು ದಿವಸಗಳಿರುತ್ತಿರಲಿಕ್ಕೆ ದುಷ್ಕಾಳವು ತಲೆದೋರಿದ್ದರಿಂದ, ತಮ್ಮ ಲ್ಲಿರುವ ನಾಲ್ಕು ಆನೆಗಳನ್ನೂ, (೩೦) ಕುದುರೆಗಳನ್ನೂ, (೧೦) ಒಂಟೆಗಳನ್ನೂ ಒಂದೊಂದು ಗ್ರಾಮಕ್ಕೆ ತಕ್ಕಷ್ಟು ಯೋಗ್ಯವಾದ ಏರ್ಪಾಡನ್ನು ಮಾಡಿ ಕಳುಹಿಸಿ ಕೊಟ್ಟು, ತಮ್ಮಲ್ಲಿರುವ (೨೦೦-೩೦೦) ಜನರನ್ನೂ, ಅವರವರ ಸ್ಥಳಕ್ಕೆ ಕಳು ಹಿಸಿ, ಸ್ವಲ್ಪಜನ ಪರಿವಾರವನ್ನುಳಿಸಿಕೊಂಡರು. ಅಷ್ಟರಲ್ಲಿ ಸಂಸ್ಥಾನದ ಸರ್ವ ಕಾ ರಭಾರಿಗಳಾದ ನಿಡಸೂಸಿ ಸಿದ್ಧರಾಮಪ್ಪನವರಿಗೂ, ಮಹಾಸ್ವಾಮಿಗಳಿಗೂ „ರಾ ಣೇಬೆನ್ನೂರ ಮುಕ್ಕಾಮಿನಲ್ಲಿ ಒಂದು ಕಾರ್ಯದಲ್ಲಿ ದುರ್ಬುದ್ಧಿಯಿಂ ವಾದವಿವಾದವಾ ಗಿನಿಡಸೂಸಿ ಸಿದ್ಧರಾಮಪ್ಪನವರು, ನಿರ್ವಾಣೆಪ್ಪನವರು, ದುರ್ಗದ ಶೆಟ್ಟರಾಚಪ್ಪನವ ರು,ಬೇಸರವಾನಸರಾಗಿ,ಚಿತ್ರಕಲ್ಲುದುರ್ಗಕ್ಕೆ ಮೊದಲೇ ಹೊರಟು ಹೋಗಿ, ಬೃಹನ್ಮಠ ದಲ್ಲಿ ನಿತ್ಯದಲ್ಲಿಯೂ ನಡೆಯುವ ದಾಸೋಹಕ್ಕೆ ಸಂಗ್ರಹಿಸಿಟ್ಟ ಭಾರೀ ಧಾ ನ್ಯ ಸಮುದಾಯವನ್ನು ಅಪಹರಿಸಿದರು. ಈ ವಾರ್ತೆಯು ರಾಣೇಬೆನ್ನೂರ ಮು ಕ್ಕಾಮಿನಲ್ಲಿದ್ದ „ ಶ್ರೀಗಳವರಿಗೆ ,, ಗೊತ್ತಾದ್ದರಿಂದ, ಅದರ ವೆವಸ್ಥೆಗಾಗಿ ಬೃಹ ನ್ಮಠಕ್ಕೆ ಬಿಜಯಂಗೈಸಿ ನೋಡಲು, ತಾವು ಕೇಳಿದ ವಾರ್ತೆಯು ನಿಜವಾಗಿತ್ತು ಆ ಕೂಡ್ಲೇ „ ಶ್ರೀಗಳವರು ,, ಇನ್ನು ಸ್ವಲ್ಪ ಉಳಿದ ಧಾನ್ಯಗಳನ್ನೊಯ್ಯದಂತೆ ಅಡ್ಡೀ ಮಾಡಿಸಿದರು, ಆ ತ್ರಿವಿಧಸ್ತರು ತುಂಟಜನರನ್ನೊಡಗೂಡಿಕೊಂಡು, ನಿಡಸೂಸಿ ಸಿ ದ್ಧರಾಮಪ್ಪನವರ ಕೈಯಲ್ಲಿ ಪೂರ್ವದಂತೆ ಖಜಾನೆಯ ಕೀಲೀಕಯ್ಯನ್ನು ಕೊಡಬೇಕೆಂ ದು ಹೇಳಿಕಳುಹಿಸಿದ್ದರಿಂದ, „ ಶ್ರೀಗಳವರು ,, ಅದಕ್ಕೆ ಒಪ್ಪದಿರಲು, ಅವರೆಲ್ಲಾ ಗುಂಪಾಗಿ ಬೃಹನ್ಮಠದೊಳಹೊಕ್ಕು „ ಶ್ರೀಗಳವರನ್ನು ,, ಕುರಿತು— ಈ ವರೆಗೆ ದೇ ಶಸಂಚಾರದಲ್ಲಿ ಆದಾಯವಾದ ಹಣವೆಷ್ಟು? ಖರ್ಚಾದ ಹಣವೆಷ್ಟು? ಶಿಲ್ಕು ನಿಂ ತಿರುವ ಹಣವೆಷ್ಟು? ಲೆಖ್ಖದಿಂದ ತೋರಿಸಬೇಕೆಂತಲೂ, ಶಿಲ್ಕು ನಿಂತಿರುವ ಹಣ ವನ್ನೂ, ಭಂಗಾರ-ಬೆಳ್ಳಿ ಸಾಮಾನುಗಳನ್ನೂ. ಪೂರ್ವದ ಪದ್ಧತಿಯಂತೆ ಖಾಸಾ ದ ಚರಮೂರ್ತಿ ನಿಡಸೂಸಿ ಸಿದ್ಧರಾಮಪ್ಪನವರ ವಶಕ್ಕೆ ಕೊಡಬೇಕೆಂತಲೂ ಹೇ ಳಿದರು. ಅದಕ್ಕೂ „ ಶ್ರೀಗಳವರು ,, ಒಪ್ಪದೆ ಇರಲು, ಆ ತುಂಟಜನಗಳು ಹೀಗೆ ನಾವು ಬೀಗದಕೈಗಳನ್ನು ಕೇಳಿದರೆ ಸ್ವಾಮಿಗಳು ಕೊಡುವದಿಲ್ಲ; ಖಜಾನೆ ಇರತ ಕ್ಕ „ ಶ್ರೀಕರ್ತೃ ಗದ್ದುಗೆಯು ,, ಮಂದಿರವನ್ನು ತಮ್ಮ ವಶಮಾಡಿಕೊಳ್ಳಬೇಕೆಂ ದು, ಅಕ್ರಮ ಪ್ರವೇಶ ಪ್ರಾರಂಭಿಸಲುದ್ಯುಕ್ತರಾಗಲು, „ ಶ್ರೀಗಳವರು ಶ್ರೀಕ ರ್ತೃಗದ್ದುಗೆಯು ,, ಬಾಗಿಲಿಗೆ ಬೀಗವನ್ನು ಹಾಕಿಸಿ, ಪಹರು ಮಾಡಿಸಿ, ತಾವೊಂ ದು ಕಡೆಗೆ ಇದ್ದರೆ ಈ ತುಂಟಜನರ ಬಾಧೆ ಕಡಿಮ್ಮೆಯಾಗುವದೆಂದು ತಿಳಿದು, ಬಿಜ

ಯುಗ್ಗಣಿಯು ಮಂದಿರಕ್ಕೆ ಬಿಜಯಂಗೈಸಿ ಅಲ್ಲಿರ್ದರು. ಈ ವಿಷಯವಾಗಿ ನಿಡಸೂಸಿ ಸಿದ್ಧರಾಮಪ್ಪನವರ ಮೇಲೆ ಚಿತ್ರದುರ್ಗದ ಡಿಸ್ಟ್ರಿಕ್ಟ ಡಿಪ್ಯೂಟಿ ಕಮಿಶನರ ಸಾಹೇಬರಲ್ಲಿ ಕ್ರಿಮಿನಲ್ ಮೊಕದ್ದಮೆಯು ಚೌಕಸಿಯಾಗಿ ಕಾರ್ಯಗಳು ಜರಿಗಿ, ಸದರಿ ಸಾಹೇಬರವರು—ನಿಡಸೂಸಿ ಸಿದ್ಧರಾಮಪ್ಪನವರು ಈ ಮೊಕದ್ದಮೆ ಚೌಕಸಿ ಯಾಗುವ ವರೆಗೆ ನಿಗಾವಣೆಯಲ್ಲಿರತಕ್ಕದ್ದೆಂದು ಹುಕುಂ ಮಾಡಿ, ಇಬ್ಬರು ಕಾನಸ್ಟೇಬಲ್‌ರಿಗೆ ಅವರೊಡನಿರುವಂತೆ ಆಜ್ಞೆಯನ್ನೀಯಲು, ಆ ಕಾನಸ್ಟೇಬಲ್‌ರು ನಿಡಸೂಸಿ ಸಿದ್ಧರಾಮಪ್ಪನವರ ಬೆಂಗಾವಲಾಗಿದ್ದರು. ಈ ಮೇರೆಗೆ ಆದ ಅವಮಾನದ ಮುಖವನ್ನು ಅನ್ಯರಿಗೆ ತೋರಿಸಲು ಲಜ್ಜಾನ್ವಿತನಾಗಿ, ಬೃಹನ್ಮಠದಲ್ಲಿರುವದಕ್ಕೆ ಅವಕಾಶವಿಲ್ಲದೆ ರಾತ್ರಿ ಪಹರೆಯಿಂದಲೇ ನಿರುಪಾಯನಾಗಿ, ದುರ್ಗದ ಶೆಟ್ಟಿ ರಾಜಪ್ಪನ ಗೃಹದಲ್ಲಿ ವಾಸಿಸಿ, ಬೆಳಿಗ್ಗೆ ದುರ್ಗದಶೆಟ್ಟಿ ರಾಜಪ್ಪಾ - ನಿಡಸೂಸಿ ಸಿದ್ಧರಾಮಪ್ಪ - ನಿರ್ವಾಣಪ್ಪ ಇನ್ನೂ ಮುಂತಾದ ತುಂಟಜನರುಕೂಡಿಕೊಂಡು, ಬೃಹನ್ಮಠಕ್ಕೆ ಬಂದು, „ ಶ್ರೀಕರ್ತೃ ಗದ್ದುಗೆಯ ” ದರ್ಶನವು ಸರ್ವರಿಗೆ ದಿನಂಪ್ರತಿಯಲ್ಲಿಯೂ ಆಗತಕ್ಕದ್ದು; ಆದ್ದರಿಂದ ಬೀಗವನ್ನು ತೆಗೆಸಬೇಕೆಂದು, ಸ್ವಾಮಿಗಳನ್ನು ಕೇಳಿಕೊಳ್ಳಲು ಶ್ರೀ ॥ ॥ ಮಹಾಸ್ವಾಮಿಗಳು ಅದಕ್ಕೊಡಂಬಡದಿರಲು, ಆ ತುಂಟರೆಲ್ಲಾ ಕರ್ತೃ ಗದ್ದುಗೆಯ ದರ್ಶನ ತೆಗೆದುಕೊಳ್ಳಲಿಕ್ಕೆ ಯಾರಪರವಾನಿಗೆಯೂ ಕಾರಣವಿಲ್ಲೆಂದು ಬೀಗವನ್ನು ಮುರಿದು ವಳಗೆ ಪ್ರವೇಸಿಸಿ, ಸಾಧುಗಳಂತೆ ನಟಿಸಿ, ಬಕಪಕ್ಷಿಯ ವ್ರತವನ್ನು ಕೈಕೊಂಡು, ಯಾರೂಕಾಣದಂತೆ ಜವಾಹಿರುಗಳನ್ನು ಒಂದೊಂದನ್ನೇ ತಮಗನುಕೂಲವಾದ ಸ್ಥಳಕ್ಕೆ ಕಳುಹಿಸಿದರು. ಈ ಮೇರೆಗೆ ನಡೆದಿರುವ ಸಾಧು ಸಜ್ಜನರ ಕಂಟಕರಾಗಿರುವ ಸಾಧೂ ವೇಷಧಾರಿಗಳಾದ ಸಕಲಗುಣಸಂಪನ್ನರು ಕರ್ತೃಗದ್ದುಗೆಯಲ್ಲಿ ಸದ್ದಿಲ್ಲದೆ ಕುಳಿತಿರುವದನ್ನು „ ಶ್ರೀಗಳವರು „ ನೋಡಿ, ಡಿಪ್ಯೂಟಿ ಕಮಿಶನರಸಾಹೇಬರವರ ಕಡೆಗೆ ಅರ್ಜಿಯನ್ನು ದಾಖಲ್ಮಾಡಹೋಗಲು, ರೆವ್ಹಿನ್ಯೂ ಅಫೀಸಿನಲ್ಲಿ ಕ್ರಿಮಿನಲ್ ಕೇಸಿನ ಮೊಕದ್ದಮೆಯುವಿಚಾರಣೆಯಾಗಲಾರದೆಂದು ಗೊತ್ತಾಯಿತು. ಆಮೇಲೆ ಸಿದ್ಧರಾಮಯ್ಯ - ನಿರ್ವಾಣಪ್ಪ - ಶೆಟ್ಟಿ ರಾಜಪ್ಪ ಇವರ ಅಭಿಲಾಷೆಯಂತೆ ಕರ್ತೃ ಗದ್ದುಗೆಯ ಶಿಲಾಮಯ ಮಂದಿರವೇ ಸ್ವಾಧೀನ ವಾದಮೇಲೆ ಹೇಳುವದೇನು? ( ೨೧ ) ನೇ ಪಟ್ಟದ ಮಹಾ ॥ ॥ ಸ್ವಾಮಿಗಳಾದ ಮಹಾಲಿಂಗಸ್ವಾಮಿಗಳ ಕಾಲದಲ್ಲಿ ಸಂಪಾದಿಸಲ್ಪಟ್ಟ ಜವಾಹಿರುಗಳೂ, ನಗದನಾಣ್ಯಗಳೂ, ಪೂರ್ವದಲ್ಲಿ ಮಠದೊಳಗಿದ್ದ ಚಂದಿಗೆಯೂ ಸಹ ಅಮಾನುಷಕೃತಿಯುಕ್ತರಾದ ವಿಚಾರವಿಲ್ಲದ ರಾಕ್ಷಸರಂತಿರುವ ಆ ದುಷ್ಟರ ಕೈಸೇರಿದ ಕೂಡಲೇ ಆ

ಲ್ಲಿಯೇ ರತ್ನಖಚಿತಾಭರಣಗಳು ಮಾಯಮಾದವು. ಅಂತು ( ೫ - ೬ ) ಲಕ್ಷರೂ ಪಾಯಿಗಳ ಜಿಂದಿಗೆಯು ಒಂದೇದಿವಸದಲ್ಲಿ ಆ ನೀಚರ ತುತ್ತಾಯಿತು. ಇಷ್ಟಾದ ಮೇಲೆ, ಶ್ರೀಗಳವರು " ರಾಣೀಬೆನ್ನೂರು - ಹರಿಹರ - ಹಾವೇರಿ - ಬ್ಯಾಡಿಗಿ ಮುಂತಾದ ಭಕ್ತ ಮಾಹೇಶ್ವರರಿಗೆ ವಾರ್ತೆಯಂ ಕೊಡಲು, ಹಾವೇರಿ ಮೂಸೂರ ಗುರುಶಾಂತಪ್ಪನವರೂ, ರಾಣೀಬೆನ್ನೂರ ಹರಿಹರ ಗ್ರಾಮದ ಕೆಲವುಜನ ಸದ್ಭಕ್ತರೂ ೧೦೦ ॥ ೨೦೦ ಜನರು ದುರ್ಗದ ಬೃಹನ್ಮಠಕ್ಕೆ ಪೋಗಿ, ' ಶ್ರೀಗಳವರ " ದರ್ಶನವಂ ತೆಗೆದುಕೊಂಡು, ಸಮಸ್ತ ಮಜಕೂರುತಿಳಿದುಕೊಂಡು. ಗುರುದ್ರೋಹಿಗಳ ವಿಷಯಕ್ಕೆ ಸರಕಾರದಲ್ಲಿ ಸರಿಯಾದ ಕಾರ್ಯವನ್ನೆಸಗಲು, ನಿಡಸೂಸಿ ಸಿದ್ದರಾಮಪ್ಪನು ಕೆಲವು ಭಾರಿ ಆಭರಣಗಳನ್ನು ತೆಗೆದುಕೊಂಡು, ಯಾರೂ ಕಾಣದಂತೆ ಉತ್ತರದೇಶದ ಕಡೆಗೆ ಫಲಾಯನವಾಗುವಂತೆ ತನ್ನ ಪಾದಗಳಿಗೆ ಬುದ್ಧಿಯಂ ಪೇಳಿದನು. ಇತ್ತಲಾ ಮಹಾ ॥ ॥ ಸ್ವಾಮಿಗಳಂತೆ ಸಕಲಕಾರ್ಯಗಳೂ ಸರಕಾರದಲ್ಲಿ ನಿರ್ಣಯವಾಗಲು, ಮಠದಲ್ಲಿದ್ದ ಶಿಖಾ ಶೈಲಗಳನ್ನು ನಿರ್ವಾಣಪ್ಪ ಶೆಟ್ಟಿ ರಾಚಪ್ಪಾ ಇವರು ಕದ್ದೊಯ್ದು ಬೇರೆ ತಮ್ಮ ಗುಟ್ಟಿನ ಸ್ಥಲದಲ್ಲಿರಿಸಿದ್ದರಿಂದ, ಆ ವಿಷಯಕ್ಕೆ ಸರಕಾರದವರು ಒಂದು ತಿಂಗಳಲ್ಲಿ ನಿರ್ವಾಣಪ್ಪನೂ, ಶೆಟ್ಟಿ ರಾಚಪ್ಪನೂ ತಂದು ಕೊಡದೆ ಇರುವ ಪಕ್ಷದಲ್ಲಿ, ಯೋಗ್ಯ ಶಾಸನಕ್ಕೊಳಗಾಗುವರೆಂತಲೂ ಆರ್ಡರನ್ನು ಮಾಡಿದ್ದರಿಂದ, ಆ ಜನಗಳು ಆ ಎರಡೂವಸ್ತುಗಳನ್ನು ಮಹಾ ॥ ಸ್ವಾಮಿಯವರಿಗೊಪ್ಪಿಸಿದರು. ಈ ವ್ಯಾಜ್ಯದಲ್ಲಿ ನಿರ್ವಾಣಪ್ಪನು ಸಹ ಉತ್ತರ ದೇಶದ ಕಡೆಗೆ ಓಡಿಹೋದನು.

ಇಷ್ಟಾದಮೇಲೆ ಹರಿಹರ ರಾಣೀಬೆನ್ನೂರ ಹಾವೇರಿಯ ಮುಖ್ಯರು ಮಹಾಸ್ವಾಮಿಗಳಿಂದಾಶೀರ್ವಾದವಂ ಪೊಂದಿ, ತಮ್ಮ ತಮ್ಮ ಸ್ವಸ್ಥಾನಕ್ಕೆ ತೆರಳಿದರು. ಗುರುದ್ರೋಹಿಯಾದ ಸಿದ್ಧರಾಮಪ್ಪನು ಪುಣೆ ಮುಂತಾದ ಸ್ಥಳದಲ್ಲಿ ಆಭರಣಗಳನ್ನು ಮಾರಿಕೊಂಡು ನೋಟುಗಳನ್ನು ತೆಗೆದುಕೊಂಡು, ಬರುವ ಮಾರ್ಗದಲ್ಲಿ ಕಿಲಕೀ ಘಾಟದ ಹತ್ತರ ಕುದುರೆಯ ಗಾಡಿಯು ಬಿದ್ದು, ಆ ಅಪಘಾತದಿಂದ ಸತ್ತನು. ಈ ಸಿದ್ಧರಾಮಪ್ಪನ ಶವವನ್ನು ಸರಕಾರದವರು ಪಂಚನಾಮೆಯನ್ನು ಮಾಡಿಸಿ, ಹೊಲೆಯರಿಂದ ಹೂಳಿಸಿದರು. ಅವನ ಹತ್ತರಿರುವ ಅಸ್ತಿಯನ್ನು ಸರಕಾರದವರು ತಮ್ಮ ಕಡೆಗೆ ಡಿಪಾಜಿಟ್ಟಾಗಿ ಇರಿಸಿಕೊಂಡರು. ಇತ್ತಲಾ ಶ್ರೀ ॥ ॥ ಸ್ವಾಮಿಗಳವರು ತಮ್ಮ ರಾಜವೈಭವದ ಪರಿವಾರದೊಂದಿಗೆ ಅಜಬಾಬ ಸಮೇತ ಶಿವಮೊಗ್ಗಾ ಡಿಸ್ಟ್ರಿಕ್ಟ ಬೀರೂರ ಗ್ರಾಮಕ್ಕೆ ಬಿಜಯಂಗೆಸಲು ವಿಕ್ರಮಸಂವತ್ಸರದ ವಿಜ

ಯ ದಶಮಿಯ ಉತ್ಸಾಹವನ್ನು ಬೀರೂರಲ್ಲಿ ಸಕಲ ರಾಜವೈಭವ ಸರ್ವ ಬಿರುದಾ ವಳಿಗಳಿಂ ಪೂರೈಸಿಕೊಂಡು, ಕಾಣಿಕೆಯಂ ಸಲ್ಲಿಸಿಕೊಂಡು, ಸಕಲರಿಗೂ ದರ್ಶನಾಶೀ ರ್ವಾದವಂ ದಯಪಾಲಿಸಿ, ವಿಷುಸಂವತ್ಸರದ ವಿಜಯ ದಶಮಿಯ ಉತ್ಸಾಹವನ್ನು ನೇಮತಿಯಲ್ಲಿ ಭಕ್ತ ಮಾಹೇಶ್ವರರ ಅಭಿಷ್ಟದಂತೆ ನೆರವೇರಿಸಿ ಕೊಂಡು, ಚಿತ್ರದು ರ್ಗದ ಬೃಹನ್ಮಠಕ್ಕೆ ಬಂದು, ವಿಷುಸಂವತ್ಸರದ ಕಾರ್ತೀಕ ಶು॥ (೬) ಶುಕ್ರವಾರ ಸಾಯಂಕಾಲದ ೫ - ೫॥ ಘಂಟೆಸಮಯದಲ್ಲಿ ನಿರ್ಗುಣ ಲೀಲೆಯಂ ಧರಿಸಿದರು. ಇವರ ಗದ್ದುಗೆಯು ಚಿನ್ಮೂಲಾದ್ರಿ ಬೃಹನ್ಮಠದಲ್ಲಾಯಿತು.

---

॥ ಬ್ಯಾಡಿಗಿ ಶ್ರೀಮುಪ್ಪಿನ ಸ್ವಾಮಿನೇನಮಃ ॥

# ೨೩ನೇ ಪಟ್ಟ

( ಶಾ. ವಿ. ವೃ. )

॥ ಶ್ರೀಮತ್ಸನ್ನುತ ಯೋಗಿವರ್ಯನೆಸದಂ ಚಿನ್ಮೂಲಸಂಸ್ಥಾನದೊಳ್ ।
ಳ್ಸೋಮಾರ್ಕಾನಲನೇತ್ರಸನ್ನಿಭಸದಾ ಶ್ರೀವೀರಶೈವಾಂಬುಧಿ ॥
ಸೋಮಂ ಭಕ್ತಜನೌಘಮಂಪೊರೆಯುತತ್ಯಾನಂದ ಸಂದೋಹದಿಂ ।
ಸ್ವಾಮಿಶ್ರೀಗುರುಮುಪ್ಪಿನೇಂದ್ರಮೆರೆದಂನಿರ್ಮಾಯನಿರ್ಲೇಪದಿಂ ॥ ೧॥

ಈ (೨೩) ನೇ ಪಟ್ಟವು ಬ್ಯಾಡಿಗಿಯ ವಿರಕ್ತಮಠದ "ಶ್ರೀಮುಪ್ಪಿನಾ ರ್ಯರೆಂಬ" ಯತಿಕುಲತಿಲಕರಿಗೆ ವಿಷು ಸಂವತ್ಸರದ ಮಾರ್ಗಶಿರ್ಷ ಬಹುಳ (೯) ದಿವಸ ಆಗೋಣವಾಯಿತು. ಇವರು ದಿವ್ಯ ತೇಜೋಮಯರಾಗಿಯೂ, ಷಟ್ಸ್ಥಲಾಶ್ರಮದ ಮೂರ್ತಿಗಳಲ್ಲಿ ಅಗ್ರಗಣ್ಯರಾಗಿಯೂ, ಇದ್ದರು. ಇವರು ಬೃ ಹನ್ಮಠದಲ್ಲಿ ಲಿಂಗಪೂಜಾ, ಜಂಗಮದಾಸೋಹವನ್ನು ಮಾಡುತ್ತಾ, ಮಹಿಮಾ ಪುರುಷರಾಗಿ ಸುಖದಿಂದಿರ್ದರು. ಇವರು ತಮ್ಮ ಸಂಸ್ಥಾನದ ಪದ್ಧತಿಯಂತೆ, ಸ ಕಲ ಪರಿವಾರ ಬಿರುದಾವಳಿ ರಾಜವೈಭವದೊಡನೆ ದೇಶಸಂಚಾರಾರ್ಥವಾಗಿ ಹೊ ರಟು, ದಾವಣಗೇರಿಗೆ ಬಿಜಯಂಗೈಸಲು, ಅಲ್ಲಿರುವ ಭಕ್ತ ಮಾಹೇಶ್ವರರೆಲ್ಲಾ ಪರಮೋತ್ಸಾಹದಿಂದೆದುರ್ಗೊಂಡು ಕರೆಕೊಂಡು ಹೋಗಿ, ಸಕಲರೂ ಕಪ್ಪ ಕಾ ಣಿಕೆಯನ್ನು ಸಲ್ಲಿಸಿದರು. ಆ ನಂತರ ದಾವಣಗೇರಿಯಲ್ಲಿರುವ ಪಲ್ಲಾಗಟ್ಟೆ ಭರಮ ಣ್ಣನವರು ಮಹಾ ॥ ॥ ಸನ್ನಿಧಿಯನ್ನು ಪರಮೋತ್ಸಾಹದಿಂದೆ ತಮ್ಮ ಮನೆಗೆ

ಕರಕೊಂಡು ಹೋಗುವಾಗ್ಗೆ, ಭರಮಪ್ಪನವರ ಮನೆಯ ಒಂದು ಶಿಶುವಿಗೆ ಅತಿಶಯವಾದ ಜ್ಯಾಡ್ಯವುಂಟಾಗಿ, ಪ್ರಾಣೋತ್ಕ್ರಮಣ ಸಮಯ ಉಂಟಾಗಿದೆಂತಲೂ, ಮನೆಯಲ್ಲಿರುವವರೆಲ್ಲಾ ಘನವಾದ ಆಕ್ರೋಶದೊಡನೆ ಪ್ರಲಾಪವಂ ಗೈಯ್ಯುತ್ತಿರುವರೆಂತಲೂ, ವಾರ್ತೆಬರಲು ಮಹಾಸ್ವಾಮಿಗಳು ಶ್ರೀಮುರಿಗೇಶನ ದಯದಿಂದೇನೂ " ಅಪಾಯ ಉಂಟಾಗುವದಿಲ್ಲೆಂದು ವಾಕ್ಯವನ್ನಿತ್ತು, ಸದರಿ, ಭರಮಪ್ಪನ ಗೃಹಕ್ಕೆ ಬಿಜಯಂಗೈಸಿ, ನೋಡುತ್ತಿರುವಲ್ಲಿ, ಶ್ವಾಸಾದಿ ಚಲನೆ ಇಲ್ಲದೆ ನಿಶ್ಚೇಷ್ಟಿಯಾಗಿ ಬಿದ್ದಿರುವ ಹಸುಳನಂ ನಿರೀಕ್ಷಿಸಿ, ,, ಜಯಮುರಿಗೇಶ " ಎಂಬುವ ಜಯನಾದವನ್ನು ಚ್ಚರಿಸಿ, ತಮ್ಮ ಪಾದಂಗಳನ್ನಾಕುವಾರ ಚನ್ನವೀರಪ್ಪನ ಪಣೆಯ ಮೇಲಿರಿಸಿ ತಾವು ಶಿವಪೂಜಾ ಮಾಡುವ ಸ್ಥಳದಲ್ಲಿ ಆ ಹುಡುಗನನ್ನು ಹಾಕಿಸಿ, ಶಿವಪೂಜೆಗೆ ಪ್ರಾರಂಭಿಸಿ, ಭಸ್ಮವನ್ನು ಆ ಹುಡುಗನ ಅಂಗಕ್ಕೆ ಲೇಪಿಸಲು ಸರ್ವರೋಗಗಳು ನಿವಾರಣೆಯಾಗಿ, ಪೂರ್ವದಂತೆ ಬಾಲಲೀಲೆಯಿಂದಾಡಲಿಕ್ಕೆ ಪ್ರಾರಂಭಿಸಲು ಸರ್ವರು ಚಕಿತರಾಗಿ ಭವರೋಗವೈದ್ಯ, ಜಗದ್ಗುರು ನೀನೇಯೆಂದುಕೊಂಡಾಡಿ ಸ್ತುತಿಸಿದರು. ಅನಂತರ ಹರಿಹರಕ್ಕೆಬಂದು, ಅಲ್ಲಿರುವ ಸದ್ಭಕ್ತರ ಆದರಾತಿಥ್ಯ ಕಾಣಿಕೆಯಂ ಸ್ವೀಕರಿಸಿ, ರಾಣೇಬೆನ್ನೂರ ಮುಕ್ಕಾಮಿಗೆ ದಯಮಾಡಿಸಿದರು. ಶ್ರೀ ॥ ॥ ಗಳವರುಭಕ್ತ ಮಾಹೇಶ್ವರರ ಕಪ್ಪ ಕಾಣಿಕೆಯಂ ತೆಗೆದುಕೊಂಡು, ಬ್ಯಾಡಿಗಿ - ಹಾವೇರಿ - ಶಿರ್ಸಿ - ಸಿದ್ಧಾಪುರ ವಗೈರೆ ಸ್ಥಳಗಳಲ್ಲಿ ಸಂಚರಿಸಿ,ಆಯಾಯಗ್ರಾಮಗಳ ಭಕ್ತರ ಭಕ್ತಿಯಂ ಕೈಕೊಂಡು,ಕಪ್ಪಕಾಣಿಕೆಯಂ ವಸೂಲತೆಗೆದುಕೊಂಡು, ( ೭೨ ) ಬಿರುದಾವಳಿಗಳ ಉತ್ಸಾಹದಿಂದೆ ಪ್ರತಿ ಸಂವತ್ಸರದ ವಿಜಯ ದಶಮಿಯ ಮಹೋತ್ಸಾಹ ಗಣಾರಾಧನೆಯನ್ನು ತಪ್ಪದೆ ಬೃಹನ್ಮಠದಲ್ಲಿ ನಡೆಸುತ್ತಾ, ಚಿತ್ರದುರ್ಗದ ಹವೆಯು ಸ್ವಾಮಿಗಳಿಗೆ ಮಾನಿಸದೆ ಇರುವಕಾರಣ, ಕೆಲವು ದಿವಸ ಬ್ಯಾಡಿಗಿ ಗ್ರಾಮದಲ್ಲಿರುತ್ತಾ, ದೇಶಂಗಳಂ ಸಂಚರಿಸುತ್ತಾ, ಅಜಮಾಸು ( ೨೦ ) ವರ್ಷಗಳನ್ನು ಶಿವಸಾಮ್ರಾಜ್ಯ ವೈಭವಾತಿಶಯಾನಂದದಿಂದೆ ಕಳೆದು, ಪ್ಲವಸಂವತ್ಸರದಲ್ಲಿ ತಾ॥ (೨೬ ) ಜನೇವರಿ ೧೯೦೩ಲ್ಲಿ ಚಿತ್ರಕಲ್ಲುದುರ್ಗದ ಬೃಹನ್ಮಠದಲ್ಲಿರುತ್ತಿರಲು ಈ ಗಿರುವ ಮೈಸೂರ ಮಹಾರಾಜರಾದ ,, ಶ್ರೀಕೃಷ್ಣ ಮಹಾರಾಜರವರು " ಶ್ರೀ ॥ ॥ ಗಳ ದರ್ಶನಕ್ಕೆ ಚಿತ್ರದುರ್ಗದ ಬೃಹನ್ಮಠಕ್ಕೆ ಬಂದು, ದರ್ಶನಾಶೀರ್ವಾದವಂ ಪೊಂದಿ, ಬೃಹನ್ಮಠದಲ್ಲಿರುವ ತಮ್ಮ ಪೂರ್ವಜರಾದ ಮೈಸೂರ ಮಹಾರಾಜರು ಕೊಟ್ಟ ಬಿನ್ನಹಪತ್ರ ಸನುದುಗಳನ್ನು ನೋಡಿ, ಮಹಾಸ್ವಾಮಿಗಳಿಗೆ ಕಾಣಿಕೆಯನ್ನು ಸಲ್ಲಿಸಿ, ಬೃಹನ್ಮಠದವರಿಂದ ಮಾಡಲ್ಪಟ್ಟ ಆದರಾತಿಥ್ಯವಂ ಕೈಕೊಂಡು, ತಮ್ಮ ಪಟ್ಟಾಭಿಷೇಕದ ಮ

ಹೋತ್ಸವಕಾಲಕ್ಕೆ ನಾವು ಬಿನ್ನಹಪತ್ರವನ್ನು ಬರೆದುಕೊಳ್ಳುತ್ತೇವೆ; ಮೈಸೂರಿಗೆ ಬಿಜಯಂಗೈಸಬೇಕೆಂದು, ಮಹಾಸ್ವಾಮಿಗಳಿಗೆ ಅರಿಕೆ ಮಾಡಿಕೊಂಡು, ಅವರ ಅಪ್ಪಣೆಯಂ ಪಡೆದು, ತಮ್ಮ ರಾಜಧಾನಿಗೆ ತೆರಳಿದರು. ಅನಂತರ ಮಹಾರಾಜರವರ ಪಟ್ಟಾಭಿಷೇಕದ ಉತ್ಸಾಹಕ್ಕೆ ಶ್ರೀ ॥ ॥ ಗಳವರು ಚಿತ್ತೈಸಲಿಕ್ಕೆ ಸಂಸ್ಥಾನದ ಕೆಲವು ಕಾರಣದ ಮೂಲಕ ಸ್ವತಃ ದಯಮಾಡಿಸದೆ ಪದ್ಧತಿಯ ಮೇರೆಗೆ ಅಜಜಾಬಸಹಶಾ ಸಾ ಚರಮೂರ್ತಿಗಳನ್ನು ಕಳುಹಿಸಿದರು.

ಇತ್ತಾಲಾ ಶ್ರೀಮಹಾ॥ ॥ ಸ್ವಾಮಿಗಳು ಶುಭಕೃತು ಸಂವತ್ಸರದ ಅಶ್ವೀನ ಮಾಸದಲ್ಲಿ ದಾವಣಗೇರಿಗೆ ಬಿಜಯಂಗೈಸಲು ವಿಜಯ ದಶಮಿಯ ಉತ್ಸಾಹವನ್ನು ದಾವಣಗೇರಿಯಲ್ಲಿಯೇ ನಡಿಸಬೇಕೆಂದು ಸರ್ವ ಭಕ್ತ ಮಾಹೇಶ್ವರರು ಆಗ್ರಹದಿಂದ ಅರಿಕೆಮಾಡಿಕೊಳ್ಳಲು,ಮಹಾಸ್ವಾಮಿಗಳು ಅದಕ್ಕೊಪ್ಪಿದರು. ಅಗ್ಗೆ ದಾವಣಗೇರಿಯಲ್ಲಿ ಉತ್ಸಾಹ ಮಾಡುವಕಾಲದ ಪೂರ್ವದಲ್ಲಿಯೇ ಸ್ವಾಮಿಗಳ ಒಳಿಯಲ್ಲಿರುವ ತಿ ಬಸಯ್ಯನು ಸ್ವಾಮಿಗಳಿಗೆ ಗೊತ್ತಾಗದಂತೆ ವಜ್ರ-ವೈಡೂರ್ಯಾದಿ ನವರತ್ನ ಖಚಿತವಾದ ಶಿರಪೇಚು - ಬಾಹುಬಂಧನ ಮುಂತಾದ ( ೭೦ - ೮೦ ) ಸಾವಿರ ರೂಪಾಯಿ ಬಾಳುವ ಆಭರಣಗಳನ್ನು ಕದ್ದೊಯ್ದಡನು; ಆಭರಣಗಳು ಹೋದ ವೆಸನಮಾಡದೆ ವಿಜಯ ದಶಮಿಯ ಉತ್ಸಾಹವನ್ನು ಅಡ್ಡಪಲ್ಲಕ್ಕಿ - ಶ್ವೇತಛತ್ರ ಮುಂತಾದ ಸರ್ವ ಬಿರುದಾವಳಿಗಳಿಂದೆ ಭಕ್ತರಭಿಷ್ಟದಂತೆ ನೆರವೇರಿಸಿದರು. ಇವರ ಅಡ್ಡ ಪಲ್ಲಕ್ಕಿಯ ಪರಮೋತ್ಸಾಹವು ದಾವಣಗೇರಿಯ ಬ್ರಾಹ್ಮಣರಿಗೆ ಅಸಮಾಧಾನವನ್ನುಂಟುಮಾಡಿದ್ದರಿಂದ ಕೆಲವು ಬ್ರಾಹ್ಮಣರು ಸರಕಾರಿ ಅಧಿಕಾರಸ್ತರ ಕಡೆಗೆ ಚಿತ್ರದುರ್ಗದ ಮುರಿಗ್ಯಾಸ್ವಾಮಿಗಳು ಪರವಾನಿಗಿ ಇಲ್ಲದೆ! ಅಡ್ಡಪಲ್ಲಕ್ಕಿ ಮುಂತಾದ ಬಿರುದುಗಳಿಂದೆ ದಾವಣಗೇರಿಯಲ್ಲಿ ಉತ್ಸಾಹನಡೆಸಿದರೆಂಬದಾಗಿ, ಅರ್ಜಿಯನ್ನು ದಾಖಲ್ಮಾಡಲು, ಆ ಜಿಲ್ಲೆಯ ಸರಕಾರಿ ಅಧಿಕಾರಿ ಬ್ರಾಹ್ಮಣನೇ ಇದ್ದದರಿಂದ, ಸ್ವಾಮಿಗಳ ಪೂರ್ವಾಪರ ಸನುದುಗಳನ್ನು ವಿಚಾರಮಾಡದೆ, ಸ್ವಾಮಿಗಳು ಸರಕಾರದ ಪರವಾನಿಗಿ ಇಲ್ಲದೆ, ಬೃಹನ್ಮಠದಿಂದೆ ಸಂಚಾರಕ್ಕೆ ಹೊರಡಕೂಡದೆಂದು, ಒಂದು ಲೇಖನವನ್ನು ಸ್ವಾಮಿಯವರಿಗೆ ಕಳುಹಿಸಲು, ಆ ಬಗ್ಗೆ ,, ಶ್ರೀಗಳವರು " ತಮ್ಮ ತರ್ಫೆನಿಂದ ತಿಬಟೂರಲ್ಲಿರುವ ಪ್ಲೀಡರ ಎಲ್, ಎಲ್, ಬಿ ಮಹಾದೇವಯ್ಯನವರನ್ನು ನೇಮಿಸಿ ಕಳುಹಿಸಲು, ಅವರು ಮೈಸೂರ ಸಂಸ್ಥಾನದಲ್ಲಿ ಕೆಲಸ ನಡೆಸಿ, ಆ ಬ್ರಾಹ್ಮಣಾಧಿಕಾರಿಗಳು ಮಾಡಿದ, ಆರ್ಡರನ್ನು ರದ್ದುಪಡಿಸಿದರು.

ಇಸ್ವಾದಮೇಲೆ ಕಳವಿನಿಂದ ದಾಗಿನುಗಳನ್ನು ವೈದ ಶಿವಬಸಯ್ಯನುಸೋಲ್ಲಾಕೆ

ಪುರದಲ್ಲಿ ಆಭರಣಗಳನ್ನು ಮಾರುತ್ತಿರವಾಗ್ಗೆ ರಾವಸಾಹೇಬ ಮಲ್ಲಪ್ಪಾ ಅಣ್ಣಾ ವಾರದ ಇವರು ಪತ್ತೇಮಾಡಿ, ಅವನನ್ನೂ ಅವನಹತ್ತರಿರುವ ದಾಗೀನುಗಳನ್ನೂ ಸಹ ಸರಕಾರದವರಿಗೆ ತಿಳಿಸಿ ಪ್ರತಿ ಬಂದಿನಲ್ಲಿಡಿಸಿ, ಬ್ಯಾಡಿಗ್ಗೆ ವರ್ತಮಾನ ಕೊಡಲು, ಬ್ಯಾಡಿಗಿಯಿಂದ— ಚನ್ನವೀರಪ್ಪ ಶೆಟ್ಟರು, ನೆಲವಿಗಿ ಕಲ್ಯಾಣಪ್ಪನವರು ಮುಂತಾದ ದೈವದವರು ಹೋಗಿ, ಸರಕಾರ ತರ್ಫೆನಿಂದ ವೆವಸ್ಥ ಮಾಡಿಸಲಾಗಿ, ಕೆಲವು ಆಭರಣಗಳು ದೊರೆದವು; ಕೆಲವು ವಿಕ್ರಿಯಾಗಿ ಹೋಗಿದ್ದವು. ಆ ಅಪರಾಧಿಗೆ ಸರಕಾರದವರು ಶೀಕ್ಷೆಯನ್ನು ವಿಧಿಸಿದರು. ತರುವಾಯ ಮಹಾ ॥ ॥ ಸನ್ನಿಧಿಯು ದಾವಣಗೇರಿಯಿಂದ ಬ್ಯಾಡಿಗ್ಗೆ ಬಂದರು. ಇವರು ಶುಭಕೃತು ಸಂವತ್ಸರದ ಮಾಘ ಶು॥ ಪ್ರತಿಪದ ಗುರುವಾರ ಪ್ರಾತಃಕಾಲದ ೯ ಘಂಟೆಯು ಸಮಯದಲ್ಲಿ ಶಿವನಲ್ಲಡಕವಾದರು.

ಇವರು ಲಿಂಗೈಕ್ಯರಾಗುವ ಪೂರ್ವದಲ್ಲಿ ೮ - ೧೦ ದಿವಸಗಳ ಕೆಳಗೆ ಒಂದು ದಿನ ರಾತ್ರಿ ೨ - ೩ ತಾಸಿನ ಅಂದಾಜಿನಲ್ಲಿ ಒಂದು ತೇಜಃಪುಂಜವಾದ ದೊಡ್ಡ ನಕ್ಷತ್ರವು ಉದರಲು, ಚಂದ್ರನ ಪ್ರಕಾಶಕ್ಕಿಂತಲೂ ಹೆಚ್ಚಾದ ಪ್ರಕಾಶವು ಕಂಗೊಳಿಸಿತು; ಮತ್ತು ಗುಡು ಗುಡು ಎಂದು ಶಬ್ದವಾಯಿತು. ಅದನ್ನು ನೋಡಿದ ಸಕಲರೂ ಯಾವ ದೊಡ್ಡ ಮಹಿಮಾಪುರುಷರು ಪರಲೋಕವನ್ನೈದುವರೋ! ಎಂದು ಚಿಂತಿಸುತ್ತಿದ್ದರು. ಅಷ್ಟರಲ್ಲಿ „ ಶ್ರೀಸ್ವಾಮಿಗಳು ", ಶಿವಲೋಕವನ್ನೈದುದರಿಂದ ಆ ನಕ್ಷತ್ರದ ಸ್ಮರಣೆಯು ಸಕಲರ ಮನದಲ್ಲಿಯೂ ಬಿಂಬಿಸಿತು. ಇವರು (೨೩) ವರುಷ ಪಟ್ಟವಾಳಿದರು ಇವರ ತೋರಗದ್ದುಗೆಯು ಬ್ಯಾಡಿಗಿಯಲ್ಲಾಯಿತು.

೨೩ ನೇ ಪಟ್ಟ ಸಮಾಪ್ತ



ಕರ್ನಾಟಕ ಸರಕಾರ
ಸಾರ್ವಜನಿಕ ಗ್ರಂಥಾಲಯ ಇಲಾಖೆ
ಜಿಲ್ಲಾ ಕೇಂದ್ರ ಗ್ರಂಥಾಲಯ, ಧಾರವಾಡ

## ನಿಯತ ದಿನಾಂಕ ಪತ್ರ.

(೧) ಈ ಪುಸ್ತಕವನ್ನು ೧೫ ದಿವಸಗಳ ಮುಟ್ಟಿಗೆ ಮಾತ್ರ ಇಟ್ಟುಕೊಳ್ಳಬೇಕು. ಮತ್ತು ಕೆಳಗೆ ಕಾಣಿಸಿದ ನಿಯತ ದಿನಾಂಕ ದೊಳಗೆ ತಿರುಗಿ ಗ್ರಂಥಾಲಯಕ್ಕೆ ಮುಟ್ಟಿಸಬೇಕು.

(೨) ೧೫ ದಿವಸಗಳಿಗಿಂತ ಹೆಚ್ಚಿಗೆ ಇಟ್ಟುಕೊಂಡಲ್ಲಿ ಪ್ರತಿ ದಿನಕ್ಕೆ ೧೦ ಪೈಸೆ ದಂಡವನ್ನು ಆಕರಣಿಮಾಡಿ ನಿಮ್ಮಿಂದ ವಸೂಲ ಮಾಡಲಾಗುವದು.

| ನಿಯತ ದಿನಾಂಕ | ಮರಳಿಕೊಟ್ಟ ತಾರೀಖು | ನಿಯತ ದಿನಾಂಕ | ಮರಳಿಕೊಟ್ಟ ತಾರೀಖು |
|---|---|---|---|
| | | | |